ವಾಗ್ಭೂಷಣ ಗ್ರಂಥಮಾಲೆ ನಂ. ೮೧.

ಕರ್ನಾಟಕ

# ಸ್ವಪ್ನವಾಸವದತ್ತಂ



ಅನುವಾದಕಂ
ಪಂಡಿತ ಭೀಮಾಜಿ ಜೀವಾಜಿ ಹುಲಿಕವಿ.



"ಶ್ರೀಮಹಾವೀರ" ಮುದ್ರಣಾಲಯ ಬೆಳಗಾಂವಿ.

ಬೆಲೆ ೬ ಆಣೆ.

ವಾಗ್ಭೂಷಣ ಗ್ರಂಥಮಾಲೆ ನಂ. ೪೧.

ಕರ್ನಾಟಕ

# ಸ್ವಪ್ನವಾಸವದತ್ತಂ.

ಅನುವಾದಕಂ

**ಪಂಡಿತ ಭೀಮಾಜಿ ಜೀವಾಜಿ ಹುಲಿಕವಿ.**

**भासनाटकचक्रेऽपि छेकैः क्षिप्ते परीक्षितुम् ।**
**स्वप्नवासवदत्तस्य दाहकोऽभून्न पावकः ॥ १ ॥**

सूक्तिमुक्तावली.



ಇದನ್ನು
ಬೆಳಗಾವಿಯೊಳಗೆ ಮಿ. ದೇವೇಂದ್ರಪ್ಪಾ ಘಡೆಪ್ಪಾ ಚೌಗುಲೆ ಇವರು
ತಮ್ಮ **ಶ್ರೀ ಮಹಾವೀರ** ಮುದ್ರಣಾಲಯದಲ್ಲಿ ಮುದ್ರಿಸಿದರು.
ಮತ್ತು
ಧಾರವಾಡದೊಳಗೆ ವಾಗ್ಭೂಷಣದ ವ್ಯವಸ್ಥಾಪಕರಾದ
**ಶ್ರೀ. ಕೃಷ್ಣರಾವ ಭೀಮರಾವ ಅಂಕಲಿಗಿ**
ಇವರು ಪ್ರಸಿದ್ಧಿಸಿದರು.

ಸನ್ನ ೧೯೨೫.

**ಬೆಲೆ ಆರು ಆಣೆಗಳು.**

# ಪ್ರಸ್ತಾವನೆ.

ಕೆಲವು ವರ್ಷಗಳ ಹಿಂದೆ ಮೈಸೂರ ವಿಶ್ವವಿದ್ಯಾನಿಲಯದವರು ಕನ್ನಡ ಭಾಷೆಯಲ್ಲಿ ಉತ್ತಮವಾದ ಭಾಷಾಂತರಗ್ರಂಥಗಳನ್ನು ಬರೆದವರಿಗೆ ಪಾರಿತೋಷಕವನ್ನು ಕೊಡುತ್ತಿದ್ದರು. ಅದರಂತೆ ಭಾಸ ಮಹಾಕವಿಯಿಂದ ವಿರಚಿತವಾದ ಸಂಸ್ಕೃತ ನಾಟಕಗಳಲ್ಲಿ ಹೆಚ್ಚು ಪ್ರಸಿದ್ಧಿಯನ್ನು ಪಡೆದಿರುವ ಸ್ವಪ್ನವಾಸವದತ್ತ ಮತ್ತು ಪ್ರತಿಮಾ ಈ ಎರಡು ನಾಟಕಗಳ ಭಾಷಾಂತರಕ್ಕೆ ಅವರು ಬಹುಮಾನವನ್ನು ಕೊಡುವುದಕ್ಕಾಗಿ ಪ್ರಸಿದ್ಧಿಸಿದರು. ಅದಕ್ಕನುಸಾರವಾಗಿ ನಾನು ಈ ಸ್ವಪ್ನವಾಸವದತ್ತವನ್ನು ಬರೆದೆನು. ಬಹುದಿವಸಗಳವರೆಗೆ ಹಸ್ತಲಿಖಿತಪ್ರತಿಯು ಅವರ ಆಫೀಸಿನಲ್ಲಿಯೇ ಬಿದ್ದಿತ್ತು. ಆದರೂ ಇದನ್ನು ನಾನು ಬರೆದ ಸ್ವಲ್ಪ ದಿವಸಗಳಲ್ಲಿಯೇ ಗುಣಗ್ರಾಹಿಗಳಾದ ಕರ್ಣಾಟಕ ವಿದ್ಯಾವರ್ಧಕ ಸಂಘದವರು, ಇದನ್ನು ವಾಗ್ಭೂಷಣದ ದ್ವಾರದಿಂದ ಪ್ರಕಟಪಡಿಸಿದುದಲ್ಲದೆ ಬಹುಮಾನವನ್ನೂ ಕೊಟ್ಟು ಗೌರವಿಸಿದರು. ಆದರೆ ಮೈಸೂರ ವಿಶ್ವವಿದ್ಯಾಲಯದವರು ಹಣದ ಅನನುಕೂಲತೆಯ ಸಲುವಾಗಿ ಪಾರಿತೋಷಕದಾನವನ್ನು ನಿಲ್ಲಿಸಿಬಿಟ್ಟಿದ್ದೇವೆಂದು ಪತ್ರದ್ವಾರದಿಂದ ತಿಳಿಸಿ ಮೊನ್ನೆ ಮೊನ್ನೆ ಹಸ್ತಲಿಖಿತಪ್ರತಿಯನ್ನು ತಿರುಗಿ ಕಳಿಸಿದರೆಂಬುದು ವಿಷಾದದ ಸಂಗತಿಯಾಗಿದೆ. ಇರಲಿ.

ಈ ಸ್ವಪ್ನವಾಸವದತ್ತದ ಪ್ರಸಿದ್ಧಿಯೂ ಮಹತ್ವವೂ ಎಷ್ಟರಮಟ್ಟಿಗಿದೆಯೆಂಬುದನ್ನು ಮುಖಪೃಷ್ಠದ ಮೇಲಿನ ಸಂಸ್ಕೃತ ಶ್ಲೋಕವು ಚೆನ್ನಾಗಿ ವ್ಯಕ್ತಪಡಿಸುತ್ತದೆ. ಮೂಲ ಸಂಸ್ಕೃತದಲ್ಲಿರುವ ಸ್ವಾರಸ್ಯವು ಭಾಷಾಂತರದಲ್ಲಿ ಎಷ್ಟರಮಟ್ಟಿಗೆ ವ್ಯಕ್ತವಾಗಿದೆಯೆಂಬುದನ್ನು ಶೋಧಿಸುವ ಭಾರವನ್ನು ರಸಿಕರಾದ ವಾಚಕರ ಮೇಲೆಯೇ ಒಪ್ಪಿಸುವೆನು; ಮತ್ತು ಅವರಿಂದ ಬರುವ ಯೋಗ್ಯ

ಸೂಚನೆಗಳನ್ನು ಶಿರಸಾವಹಿಸುವೆನು. ಇನ್ನು ಭಾಸಕವಿಯ ವಿಷಯುವಾಗಿಯೂ, ಆತನ ನಾಟಕಗಳ ವಿಷಯುವಾಗಿಯೂ ಹೇಳತಕ್ಕ ವಿಷಯುವು ಬಹಳವಾಗಿದೆ. ಈಗೀಗಲಂತೂ ಸಂಸ್ಕೃತಜ್ಞರಾದ ರಸಿಕರಿಗೆ 'ಪ್ರಸ್ತುತಕವಿ ಮತ್ತು ಆತನ ನಾಟಕಗಳು' ಇದೊಂದು ಮಹತ್ವದ ಚರ್ಚೆಯ ವಿಷಯುವಾಗಿದೆ ಅದರಂತೆಯೇ ಭಿನ್ನಪ್ರಕೃತಿಯುಳ್ಳ ಅನೇಕರು ಅನೇಕತರದ ಸಾಧಕಬಾಧಕ ಪ್ರಮಾಣಗಳನ್ನು ಈ ವಿಷಯುದಲ್ಲಿ ಮುಂದೊಡ್ಡಹತ್ತಿದ್ದಾರೆ. ಹೀಗಾಗಿ ಭಾಸಕವಿಯು, ಆತನ ನಾಟಕಗಳು, ಆತನ ಕಾಲ ಈ ವಿಷಯುಗಳಲ್ಲಿ ನಿಶ್ಚಿತವಾದ ಅಭಿಪ್ರಾಯುವನ್ನು ಯಾರೂ ಸದ್ಯಕ್ಕೆ ಹೇಳುವದಿಲ್ಲ. ಕೆಲವರಂತೂ ಈಗ ಭಾಸನವೆಂದು ಪ್ರಸಿದ್ಧವಾಗಿರುವ ನಾಟಕಗಳು ನಿಜವಾಗಿ ಭಾಸಕೃತಗಳಲ್ಲವೇ ಅಲ್ಲವೆಂದು ವಾದಿಸುತ್ತಾರೆ. ಇವೆಲ್ಲ ವಿಷಯುಗಳನ್ನು ಸೋದಾಹರಣವಾಗಿ ಚರ್ಚಿಸಿ, ನಿಶ್ಚಿತಾಭಿಪ್ರಾಯುವನ್ನು ಸಪ್ರಮಾಣವಾಗಿ ಸಿದ್ಧಪಡಿಸುವದು ಅತ್ಯವಶ್ಯವಾಗಿದೆ, ಆದರೆ ಅದು ಈ ಚಿಕ್ಕ ಪ್ರಸ್ತಾವನೆಯ ಕ್ಷೇತ್ರವನ್ನು ಮೀರಿದ ವಿಷಯುವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಮೇಲಿನ ಎಲ್ಲ ವಿಷಯುಗಳನ್ನೂ ಚರ್ಚಿಸಹೋದರೆ, ಪ್ರಸ್ತುತ ನಾಟಕಕ್ಕಿಂತಲೂ ಹೆಚ್ಚಿನ ಸ್ಥಳವನ್ನು ಅವು ಆಕ್ರಮಿಸಬಹುದೆಂದು ತೋರುತ್ತದೆ.. ಹಾಗಾದರೆ ಅದು ಬಾಯಿಗಿಂತಲೂ ತುತ್ತು ದೊಡ್ಡದೆಂಬಂತೆ ಹಾಸ್ಯಾಸ್ಪದವಾಗುವದು. ಆದುದರಿಂದ ಭಾಸಕವಿಯ ಮತ್ತು ಆತನ ನಾಟಕಗಳ ವಿಸ್ತೃತವಾದ ಚರಿತ್ರವನ್ನು ಬೇರೆಯಾಗಿಯೇ ಪ್ರಕಟಿಸುವದು ಯೋಗ್ಯವೆಂದು ತೋರುತ್ತದೆ. ನನ್ನ ಈ ಅಭಿಪ್ರಾಯುವನ್ನು ಆನಂದದಿಂದ ಅನುಮೋದಿಸಿ 'ಭಾಸಕವಿಯ ಚರಿತ್ರ' ವನ್ನು ವಾಗ್ಭೂಷಣದ ದ್ವಾರದಿಂದ ಕಾಲಾನುಕೂಲದಿಂದ ಪ್ರಸಿದ್ಧಿಸುವದಕ್ಕೆ ಅಭಿವಚನವನ್ನಿತ್ತುದಕ್ಕಾಗಿ ವಾಗ್ಭೂಷಣದ ವ್ಯವಸ್ಥಾಪಕರೂ ನಮ್ಮ ಸನ್ಮಿತ್ರರೂ ಆದ ಶ್ರೀ. ಕೃಷ್ಣರಾವ ಅಂಕಲಗಿಯುವರಿಗೆ ಧನ್ಯವಾದಗಳು.

ಆದುದರಿಂದ ಈ ಪ್ರಸ್ತಾವನೆಯಲ್ಲಿ ಇನ್ನೇನೂ ಹೆಚ್ಚು ಸಂಗತಿಗಳನ್ನು ಹೇಳದೆ ಇದ್ದುದಕ್ಕಾಗಿ ವಾಚಕರು ಸಿಟ್ಟಾಗಲಿಕ್ಕಿಲ್ಲೆಂದು ನಂಬುತ್ತೇನೆ. ಮತ್ತು ಇನ್ನು ಒಂದೇ ಒಂದು ಮಾತನ್ನು ಹೇಳಿ ಈ ಪ್ರಸ್ತಾವನೆಯನ್ನು ಮುಗಿಸುತ್ತೇನೆ.

ನಮ್ಮ ಭಾಷೆಯಲ್ಲಿ ಭಾಷಾಂತರ ಗ್ರಂಥಗಳೇ ಸ್ವತಂತ್ರ ಗ್ರಂಥಗಳಿಗಿಂತ ಹೆಚ್ಚಾಗಿ ರಚಿತವಾಗಹತ್ತಿರುವದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಆದರೆ ಮೂಲಗ್ರಂಥದ ವಿಷಯವಾಗಿಯೂ ಆ ಗ್ರಂಥಕರ್ತೃವಿನ ವಿಷಯವಾಗಿಯೂ ಸ್ವಲ್ಪವಾದರೂ ಉಲ್ಲೇಖವನ್ನು ಮಾಡದೆ, ಸ್ವತಃ ಬರೆದಂತೆ ಜನರಲ್ಲಿ ಆಭಾಸವನ್ನುಂಟುಮಾಡುವ ಪ್ರಯತ್ನವು ಭಾಷೆಗಾಗಲಿ ಲೇಖಕನಿಗಾಗಲಿ ಶ್ರೇಯಸ್ಕರವಲ್ಲ; ಮತ್ತು ಗ್ರಂಥಕರ್ತರಿಗೂ, ಪ್ರಕಾಶಕರಿಗೂ ಲೇಖಕರಿಗೂ ಇರತಕ್ಕ ಹಕ್ಕುಗಳನ್ನು ಉಲ್ಲಂಘಿಸುವದೂ ಮನುಷ್ಯನ ಧರ್ಮವಲ್ಲ. ಸದ್ಯಕ್ಕೆ ಉಪಲಬ್ಧವಾದ ಭಾಸಕವಿಯ ನಾಟಕಗಳನ್ನು ತ್ರಿವೇಂದ್ರಮ್ಮದ ಶ್ರೀ. ಟಿ. ಗಣಪತಿಶಾಸ್ತ್ರಿಯೆಂಬ ವಿದ್ವಾಂಸರಾದ ರಸಿಕರವರು ಪ್ರಸಿದ್ಧಿಸಿದ್ದಾರೆ. ನಾನು ಅವರ ಅನುಮತಿಯಿಂದಲೇ ಈ ನಾಟಕವನ್ನು ಅನುವಾದಿಸಿದ್ದೇನೆ; ಮತ್ತು ಇತರ ನಾಟಕಗಳನ್ನಾದರೂ ಪರಿವರ್ತಿಸುವದಕ್ಕೆ ಅವರು ಉದಾರಮನಸ್ಸಿನಿಂದ ಸಮ್ಮತಿಯನ್ನು ಕೊಟ್ಟಿದ್ದಾರೆ. ಹೀಗಿದ್ದರೂ ಇತರ ಗ್ರಂಥಕಾರರು ಕೆಲವರು ಭಾಸಕವಿಯ ಬೇರೆ ಬೇರೆ ರೂಪಕಗಳನ್ನು ಕನ್ನಡಿಸಿ ಎಲ್ಲೆಲ್ಲಿಯೋ ಪ್ರಕಟಗೊಳಿಸಲಾರಂಭಿಸಿದ್ದಾರೆಂದು ಕೇಳುತ್ತೇನೆ. ಈ ವಿಷಯವನ್ನು ಈಗ ನಾನು ಶ್ರೀ. ಗಣಪತಿಶಾಸ್ತ್ರಿಯವರಿಗೆ ತಿಳಿಸಿದ್ದೇನೆ. ಭಾಸಕವಿಯ ನಾಟಕಗಳನ್ನು ಕನ್ನಡದಲ್ಲಿ ಭಾಷಾಂತರಿಸುವವರಿಗೂ ಪ್ರಸಿದ್ಧಿಸುವವರಿಗೂ ಈ ವಿಷಯವು ತಿಳಿದಿರಲೆಂದು ಇಲ್ಲಿ ಇದನ್ನು ಉಲ್ಲೇಖಿಸಿದೆನು.

ಕೊನೆಯಲ್ಲಿ ಈ ಭಾಷಾಂತರ ಕಾರ್ಯಕ್ಕೆ ಮೂಲ ಪ್ರೇರಕರಾದ ಮೈಸೂರ ವಿಶ್ವವಿದ್ಯಾಲಯದವರಿಗೂ, ವಾಗೂ ಷಣದ ದ್ವಾರದಿಂದ

ಪ್ರಕಟಿಸಿ ಪಾರಿತೋಷಕವನ್ನಿತ್ತು ಗೌರವಿಸಿದುದಕ್ಕಾಗಿ ಕರ್ನಾಟಕ ವಿದ್ಯಾವರ್ಧಕ ಸಂಘದವರಿಗೂ ಕನ್ನಡದಲ್ಲಿ ಪ್ರಸಿದ್ಧಿಸುವದಕ್ಕೆ ಅನುಜ್ಞೆಯನ್ನು ಕೊಟ್ಟದ್ದಕ್ಕಾಗಿ ಶ್ರೀ. ಗಣಪತಿಶಾಸ್ತ್ರಿಯವರಿಗೂ ನನ್ನ ಮನಃಪೂರ್ವಕವಾದ ಕೃತಜ್ಞಗಳನ್ನರ್ಪಿಸಿ, ಇದೇ ಮೇರೆಗೆ ಕನ್ನಡನುಡಿಯ ಮತ್ತು ಕನ್ನಡಿಗರ ಸೇವೆಯನ್ನು ಮಾಡುವ ಸುಪ್ರಸಂಗವನ್ನು ಆಗಾಗ್ಗೆ ಒದಗಿಸಿಕೊಡೆಂದು ದಯಾಘನನಾದ ಪರಮಾತ್ಮನನ್ನು ಅನನ್ಯಭಾವದಿಂದ ಪ್ರಾರ್ಥಿಸುತ್ತೇನೆ.

ವಿದ್ವದನುರಕ್ತ,

**ಭೀಮಾಜಿ ಜೀವಾಜಿ ಹುಲಿಕವಿ.**

---

# ಮುನ್ನುಡಿ.

ಕನ್ನಡ ವಾಙ್ಮಯದಲ್ಲಿ ನಾಟಕಗ್ರಂಥಗಳು ಕಡಿಮೆ. ಅದರಲ್ಲಿ ಯೂ ರಸವತ್ತಾದ, ರಂಗಭೂಮಿಯಲ್ಲಿ ಅಭಿನಯಿಸಲು ತಕ್ಕು ವಾದ ಆಧುನಿಕ ನಾಟಕಗಳ ಸಂಖ್ಯೆಯನ್ನು ಎಣಿಸುವದಕ್ಕೆ ಎತ್ತಿದ ಬೆರಳುಗಳೆಲ್ಲಾ ಹಾಗೆಯೇ ಉಳಿಯುವಂತೆ ತೋರುವದು. ಅಲ್ಲೊಂದು ಇಲ್ಲೊಂದು ಮರಾಟಿಯ ನಾಟಕಗಳನ್ನು ಹರಿದು ತೆರಿದು ಹಚ್ಚಿ ಚುಚ್ಚಿದಂಥವುಗಳು ನಮ್ಮ ವಾಙ್ಮಯಕ್ಕೆ ಪೋಷಕ ವಾಗುವವೆಂದು ಹೇಳಲಾಗುವದಿಲ್ಲ. ಕೆಲವರು ಹಳೆಯ ಸಂಸ್ಕೃತ ನಾಟಕಗಳನ್ನು ಪರಿವರ್ತಿಸಿದರೂ ಅವು ಈಗಿನ ರಂಗಭೂಮಿಗೆ ಎಷ್ಟುಮಟ್ಟಿಗೆ ಒಪ್ಪುವವೆಂಬುದನ್ನು ಹೇಳಲಾಗುವದಿಲ್ಲ. ಸಾಂಪ್ರತದ ಜನತೆಯ ರೀತಿ ನೀತಿಗಳನ್ನು ಪ್ರತಿರೂಪಿಸುವಂಥ ನಾಟಕ ಗಳನ್ನು ಬರೆಯುವದು ಅಷ್ಟು ಸುಲಭವಲ್ಲವೆಂದೂ ನಾಟಕರಚನೆಯು ವಾಙ್ಮಯವ್ಯವಸಾಯದ ಉಚ್ಚತಮ ಸ್ಥಾನವನ್ನಾಕ್ರಮಿಸಿ ರುವದೆಂದೂ ಬಲ್ಲವರು ಹೇಳುವರು. ವಾಗ್ಭೂಷಣದ ವಾಚಕ ರಲ್ಲಿ ಯಾರಾದರೂ ಇಂತಹ ಮಹಾಕಾರ್ಯಕ್ಕೆ ಮುಂದೆ ಬಂದರೆ ತುಂಬಾ ಆದರದಿಂದ ಬರಮಾಡಿಕೊಳ್ಳುವೆವು.

ಪ್ರಸ್ತುತ ನಾಟಕದ ವಿಷಯವಾಗಿ ಅನೇಕ ಸಂಗತಿಗಳನ್ನು ಲೇಖಕರು ಹೇಳಿಯೇ ಇರುವರು. ‘ ದೃಶ್ಯಕಾವ್ಯ ’ ವೆಂಬ ದೃಷ್ಟಿ ಯಿಂದ ಅದರ ಸ್ಥಾನವನ್ನು ಪಾಠಕರು ನಿರ್ಣಯಿಸಲಿ. ಸಂಘದ ಪರವಾಗಿ ಪ್ರಕಟವಾಗುತ್ತಿರುವ ಪತ್ರಿಕೆಯಾದ ವಾಗ್ಭೂಷಣದಲ್ಲಿ ಇದನ್ನು ಪ್ರಕಟಿಸಲು ಸಮ್ಮತಿಸಿದುದಕ್ಕಾಗಿ ನಾವು ಲೇಖಕರ ಆಭಾರವನ್ನು ಮನ್ನಿಸುವೆವು.

**ಧಾರವಾಡ.** — **ಕೆ. ಬಿ. ಅಂಕಲಗಿ.**

೧೦-೧೦-೧೯೨೪. — ವ್ಯವಸ್ಥಾಪಕ ವಾಗ್ಭೂಷಣ.

# ಕರ್ಣಾಟಕ-ಸ್ವಪ್ನವಾಸವದತ್ತಂ.

## ಮೊದಲನೆಯ ಅಂಕವು.

( ನಾಂದಿಯಾದ ಬಳಿಕ ಸೂತ್ರಧಾರನು ಬರುತ್ತಾನೆ. )

**ಸೂತ್ರಧಾರ:—**

*ಅವನಿಕೆ ಬಲಭುಜಯುಗ **ವಾ**- ।
**ಸವದತ್ತಾ**ಬಲ**ಮುದಯನ**ವೇಂದು ಸವರ್ಣಂ ॥
**ಸುವಸಂತಕ**ಮ್ರುಮನಿಶವೊ- ।
ಲವಿನಿಂ **ಪದ್ಮಾವತೀ**ಣ್ರ್ **ಪೂರ್ಣಂ** ನಿಮ್ಮ ॥ ೧ ॥

ಹೀಗೆಂದು ಪೂಜ್ಯರನ್ನು ಬಿನ್ನವಿಸುವೆನು. ಅಹಾ! ಇಂತು ಬಿನ್ನಹಮಾಡಿಕೊಳ್ಳಬೇಕೆಂಬ ವಿಚಾರದಲ್ಲಿ ನಾನು ಮಗ್ನನಾಗಿರಲು, ಈ ಧ್ವನಿಯು ಎಲ್ಲಿಂದ ಕೇಳಬರುತ್ತಿರುವದು? ಆಗಲಿ; ನೋಡುತ್ತೇನೆ. ( ಕಿವಿಗೊಟ್ಟು ಕೇಳುತ್ತಾನೆ. )

( ತೆರೆಯಲ್ಲಿ )

“ ನಡೆಯಿರಿ, ನಡೆಯಿರಿ; ಆರ್ಯರೇ, ಇಲ್ಲಿಂದ ಹೊರಡಿರಿ. ”

**ಸೂತ್ರಧಾರ:—** ಓಹೋ! ಗೊತ್ತಾಯಿತು.

ಕಡು ನೇಹಿಗರೆಳವೆಣ್ಗಳ್- ।
ನೊಡಗೊಂಡೈತರ್ಪರಾ ಮಗಧ ನೃಪಸಾಳ್ಗಳ್ ॥

---

* ಸುಲಲಿತ **ವಾಸವದತ್ತಾ**- ।
ಬಲ**ಮುದಯನ**ವೇಂದು ರುಚಿ **ವಸಂತಕ**ಲಾಢ್ಯಂ ॥
ಬಲರಾಮನ ಭುಜಯುಗಳಂ ।
ಸಲಹುಗೆ **ಪದ್ಮಾವತೀ**ಣ್ರ್**ಪೂರ್ಣಂ** ನಿಮ್ಮಂ ॥ ೧ ॥

ಬಿಡದೆಲ್ಲ ಲೋಗರಂ ಪೊರ- ।
ಮಡಿಪರ್ ನಿಶ್ಶಂಕೆಯಿಂ ತಪೋವನದಿಂದಂ ॥ ೨ ॥

[ ಹೊರಟು ಹೋಗುತ್ತಾನೆ.

( ಇಂತಿದು ಸ್ಥಾಪನೆ. )

( ಅನಂತರ ಇಬ್ಬರು ಭಟರು ಬರುತ್ತಾರೆ. )

ಭಟರು:— ನಡೆಯಿರಿ, ನಡೆಯಿರಿ; ಆರ್ಯರೇ, ಇಲ್ಲಿಂದ ಹೊರಡಿರಿ. ( ಆ ಮೇಲೆ ಬೈರಾಗಿಯ ವೇಷವನ್ನು ತಳೆದ ಯೌಗಂಧರಾಯಣನೂ, ಅವಂತಿಕೆಯ ವೇಷವನ್ನು ಹಾಕಿಕೊಂಡ ವಾಸವದತ್ತೆಯೂ ಬರುತ್ತಾರೆ. )

ಯೌಗಂಧರಾಯಣ:—( ಕಿವಿಗೊಟ್ಟು ಕೇಳಿ ) ಇದೇನು? ಇಲ್ಲಿಯೂ ಜನರನ್ನು ಹೊರಡಿಸುತಿದ್ದಾರಲ್ಲ! ಇದರಿಂದ,

ಮುದಮಿರ್ಪರ್ ಬನವಣ್ಗಳಿಂಬೆ ಸತತಂ ವನ್ಯರ್
ಸುಧೀರರ್ ಜನ- ।
ಗೋಪವಿಕ್ಕುಂ ಭಯಮಾತ್ರಮುಸ್ಥಿರನಿಶಂ ನಾರ್ಬ
ಟ್ಟೆಯುಂ ತೊಟ್ಟಿಪರ್ ॥
ಮದಿಸಿರ್ಪಂ ಚಲಭಾಗ್ಯದಿಂ ವಿನಯಹೀನಂ ಸೊರ್ಕ
ನಾಂತಾವನಿಂ- ।
ತಿದನೂರಂ ಸುರಹಸ್ತಪೋವನಮುಮಂ ಗೆಯ್ವಂ
ತನತ್ತಾಜ್ಞೆಯಿಂ ॥ ೩ ॥

ವಾಸವದತ್ತೆ:— ಪೂಜ್ಯನೇ, ಈ ಪ್ರಕಾರ ಅವನು ಹೊರಡಿಸುತ್ತಿದ್ದಾನೇ?

ಯೌಗಂಧರಾಯಣ:— ಪೂಜ್ಯೆಯೇ, ಧರ್ಮದಿಂದ ದೂರದಲ್ಲಿರುವವನು !

**ವಾಸವದತ್ತೆ:**—ಪೂಜ್ಯನೇ, ಹಾಗೆಂದು ನನ್ನ ಅಭಿಪ್ರಾಯವಲ್ಲ. ಆದರೆ ನನ್ನನ್ನೂ ಇಲ್ಲಿಂದ ತಳ್ಳುವರೇನೋ! ಎಂದು ಹಾಗೆ ಹೇಳಿದೆನು.

**ಯೌಗಂಧರಾಯಣ:**–ಪೂಜ್ಯೆಯೇ, ನಿಜಸ್ವರೂಪವನ್ನು ಮುಚ್ಚಿಕೊಂಡಿರುವ ದೊಡ್ಡವರಿಗೆ ಹೀಗೆಯೇ ಅವಮಾನವಾಗುತ್ತದೆ.

**ವಾಸವದತ್ತೆ:**—ಪೂಜ್ಯನೇ, ಈ ಅವಮಾನದಿಂದ ಮನಸ್ಸಿಗೆ ಭೇದವುಂಟಾಗುವಂತೆ, ದಣಿವಿನಿಂದ ಉಂಟಾಗುವುದಿಲ್ಲ!

**ಯೌಗಂಧರಾಯಣ:**—ಪೂಜ್ಯೆಯೇ, ಇಂತಹ ಸುಖವನ್ನು ನೀನು ಮೊದಲು ಅನುಭವಿಸಿ ಈಗ ಮಾತ್ರ ಬಿಟ್ಟಿರುತ್ತೀ. ಈ ವಿಷಯದಲ್ಲಿ ವ್ಯಸನಬಡಬೇಡ. ಯಾಕಂದರೆ,

ನಿನಗಮಿದಿಚ್ಛಿತಮಾಯ್ತು ಗ- ।
ಮನಮುಂತೆಯೆ ನಡೆವೆ ಪತಿಯ ಗೆಲವಿಂ ಮುಂದುಂ ॥
ದಿನದಿನಕೆ ಬದಲಿಸುವ ಭಾ- ।
ಗ್ಯನಿವಹಮುದು ಗಾಲಿಸಲ್ಗಳೋಳಿ ಪ್ರೊಲಿಕರ್ಣಂ ॥ ೪ ॥

**ಭಟರು:**—ಸಡೆಯಿರಿ; ನಡೆಯಿರಿ; ಆರ್ಯರೇ, ಇಲ್ಲಿಂದ ಹೊರಡಿರಿ.

( ಕಾಂಚುಕೀಯನು ಬರುತ್ತಾನೆ. )

**ಕಾಂಚುಕೀಯ:**— ಸಂಭಷಕಾ, ಬೇಡ ಬೇಡ. ಹಾಗೆ ಹೊರಡಿಸಬೇಡ ನೋಡು.

ಅರಸನಪವಾದಮುಂ ಪರಿ- ।
ಹರಿಪ್ಪುದು, ಬಿರುನುಡಿವುದಲ್ಲ ತವಸಿಗೆ ಯುಕ್ತಂ ॥
ಪುರಪರಿಭವಮೋಚನಮುನಿ- ।
ವರೆಳಸಿ ಸುಮನಸ್ಕರೆಯ್ದಿ ಬನದೊಳಗಿರ್ಪರ್ ॥ ೫ ॥

**ಭಟರು:**—ಹಾಗೆಯೇ ಆಗಲಿ.

[ಹೊರಟು ಹೋಗುತ್ತಾರೆ.

**ಯೌಗಂಧರಾಯಣ:**—ಅಹಹಾ! ಈತನು ಧರ್ಮಾಧರ್ಮಗಳನ್ನು ತಿಳಿದವನು. ಮಗಳೇ, ಇವನ ಹತ್ತರ ಹೋಗೋಣ, ಬಾ.

**ವಾಸವದತ್ತೆ:**—ಆಗಲಿ; ಇಗೋ ಬರುತ್ತೇನೆ.

**ಯೌಗಂಧರಾಯಣ:**—( ಸಮೀಪಕ್ಕೆ ಬಂದು ) ಮಹನೀಯರೇ, ಜನರನ್ನು ಹೀಗೇಕೆ ಹೊರಡಿಸುತ್ತಿದ್ದಾರೆ?

**ಕಾಂಚುಕೀಯ:**—ಪೂಜ್ಯರಾದ ತಪಸ್ವಿಗಳೇ, ಕೇಳಿರಿ.

**ಯೌಗಂಧರಾಯಣ:**—( ತನ್ನಲ್ಲಿ ) ತಪಸ್ವಿಗಳೆಂಬುದು ಒಳ್ಳೆಯ ಮಾತು; ಆದರೆ ಬಳಕೆ ಇಲ್ಲದಿರುವುದರಿಂದ ಅದು ನನ್ನ ಮನಸ್ಸಿಗೆ ಚೆನ್ನಾಗಿ ಅಂಟುವುದಿಲ್ಲ.

**ಕಾಂಚುಕೀಯ:**—ಪೂಜ್ಯರೇ, ಕೇಳಿರಿ. ಅವಳು, ಗುರುಗಳಿಂದ ದರ್ಶಕರೆಂದು ಕರೆಯಿಸಿಕೊಳ್ಳುವ ನಮ್ಮ ಮಹಾರಾಜರ ತಂಗಿಯಾದ ಪದ್ಮಾವತಿಯು. ಈಕೆಯು ನಮ್ಮ ಮಹಾರಾಜರ ತಾಯಿಯಾದ ಮತ್ತು ಈ ಆಶ್ರಮದಲ್ಲಿರುವ ಮಹಾದೇವಿಯವರ ಸನ್ನಿಧಿಗೆ ಬಂದು, ಅವರ ಆಶೀರ್ವಾದವನ್ನು ತೆಗೆದುಕೊಂಡು ಮತ್ತೆ ಅರಮನೆಗೇ ಹೋಗುವಳು. ಆದಕಾರಣ ಪದ್ಮಾವತಿಯು ಈ ಹೊತ್ತು ಇಲ್ಲಿಯೇ ಇರುತ್ತಾಳೆ. ಆದುದರಿಂದ,

**ಬನದಿಂ ತರ್ಕೆ ತವಸಿಗಳ್ ।**
**ಮನವೊಳಸೆ, ಸಮಿತ್ಸುದರ್ಭಸುಮತೀರ್ಥಮನೀ- ॥**
**ಜನಪಜೆ, ಧರ್ಮಪ್ರಿಯೆ, ಮುನಿ- ।**
**ಜನಪೀಡೆಯನೆಳಸಳಾಕೆಗದು ಕುಲಧರ್ಮಂ ॥ ೬ ॥**

**ಯೌಗಂಧರಾಯಣ:**—( ತನ್ನಲ್ಲಿ ) ಹೀಗೆಯೇ? ಪುಷ್ಪಕಭದ್ರ ಮೊದಲಾದ ಜೋಯಿಸರು, ನಮ್ಮ ಒಡೆಯನ ರಾಣಿಯಾಗುವಳೆಂದು ಹೇಳಿದ ಪದ್ಮಾವತಿಯು ಇವಳೇ ಏನು?

ಕಡು ನೇಹಂ ಕಡುಪಗೆ ಮೋ- ।
ಹೊಡರ್ಚುಗುಂ ಮನಸಿನಿರವಿನಿಂ ಪ್ರಾಣಿಗಳೊಳ್ ॥
ಕಡುಮುಮತೆಯಿವಳೊಳೆನಗೆ- ।
ನ್ನೊಡೆಯನ ಮಡದಿಯಿವಳಪ್ಪಳೆಂಬ ಬಯಕೆಯಿಂ ॥೭॥

**ವಾಸವದತ್ತೆ:**—(ತನ್ನಲ್ಲಿ) ಅರಸನ ಮಗಳೆಂಬುದನ್ನು ಕೇಳಿ ಇವಳ ವಿಷಯವಾಗಿ ಭಗಿನೀಪ್ರೇಮವು ನನ್ನಲ್ಲಿ ಹುಟ್ಟಿದೆ.

(ಅನಂತರ ಪರಿವಾರದಿಂದ ಕೂಡಿದ ಪದ್ಮಾವತಿಯೂ ಚೇಟಿಯೂ ಬರುತ್ತಾರೆ.)

**ಚೇಟಿ:**—ಭರ್ತೃದಾರಿಕೆಯು ಹೀಗೆ ದಯಮಾಡಿಸಬೇಕು. ಇದೇ ಆಶ್ರಮವು. ಪ್ರವೇಶಿಸಬೇಕು.

(ಆ ಮೇಲೆ, ಕುಳಿತುಕೊಂಡಿರುವ ತಾಪಸಿಯು ಪ್ರವೇಶಿಸುತ್ತಾಳೆ.)

**ತಾಪಸಿ:**—ರಾಜಕುಮಾರಿಗೆ ಸ್ವಾಗತವು.

**ವಾಸವದತ್ತೆ:**—(ತನ್ನಲ್ಲಿ) ಇವಳೇ ಆ ಅರಗುವರಿ. ಇವಳ ರೂಪವು ಕುಲಕ್ಕೆ ತಕ್ಕುದಾಗಿಯೇ ಇದೆ.

**ಪದ್ಮಾವತಿ:**—ಪೂಜ್ಯೆಯೇ, ಎರಗುತ್ತೇನೆ.

**ತಾಪಸಿ:**—ಚಿರಂಜೀವಿನಿಯಾಗು. ಮಗಳೇ, ಬಾ ಬಾ, ಇತ್ತ ಬಾ; ತಪೋವನವು ಅತಿಥಿಗಳಿಗೆ ಸ್ವಕೀಯಗೃಹವೇ ಆಗಿರುತ್ತದೆ.

**ಪದ್ಮಾವತಿ:**—ಅಹುದಹುದು. ತುಸುವಾದರೂ ಸಂದೇಹವಿಲ್ಲ. ಪೂಜ್ಯಳೇ, ನಿನ್ನ ಈ ಬಹುಮಾನದ ಮಾತುಗಳಿಂದ ಅನುಗೃಹೀತೆಯಾದೆನು.

**ವಾಸವದತ್ತೆ:**—(ತನ್ನಲ್ಲಿ) ಇವಳ ರೂಪವಷ್ಟೇ ಅಲ್ಲ; ಮಾತುಗಳೂ ಮಧುರವಾಗಿವೆ.

**ತಾಪಸಿ:**—ಕಲ್ಯಾಣೀ, ಭದ್ರಮುಖನ ತಂಗಿಯಾದ ಇವಳನ್ನು ಯಾವ ಅರಸನು ತಾನೆ ಮದುವೆಯಾಗಬಯಸುವುದಿಲ್ಲ?

**ಚೇಟಿ:**—ಉಜ್ಜಯಿನೀ ಪಟ್ಟಣದ ಒಡೆಯನಾದ ಪ್ರದ್ಯೋತನೆಂಬ ಅರಸನಿದ್ದಾನೆ. ಅವನು ತನ್ನ ಮಗನಿಗೆ ಪದ್ಮಾವತೀದೇವಿಯರನ್ನು ಕೊಡಬೇಕೆಂದು ದೂತರನ್ನು ಕಳುಹಿಸತಕ್ಕವನಿದ್ದಾನೆ.

**ವಾಸವದತ್ತೆ:**—(ತನ್ನಲ್ಲಿ) ಆಗಲಿ, ಆಗಲಿ; ಇವಳೀಗ ನನ್ನವಳಾದಳು.

**ತಾಪಸಿ:**—ಈ ಬಹುಮಾನಕ್ಕೆ ಇವಳು ತಕ್ಕವಳು. ಎರಡೂ ಅರಸುಮನೆತನಗಳು ದೊಡ್ಡವೆಂದು ಹೆಸರಾಗಿವೆ.

**ಪದ್ಮಾವತಿ:**—(ಕಾಂಚುಕೀಯನನ್ನು ಕುರಿತು) ಪೂಜ್ಯನೇ, ನನ್ನನ್ನು ಅನುಗ್ರಹಿಸುವದಕ್ಕೆ ಸಮರ್ಥರಾದ ಮುನಿಜನರನ್ನು ಕಂಡೆಯಾ? ಆರಾರಿಗೆ ಆವಾವುದು ಇಷ್ಟವೋ ಅವರವರಿಗೆ ಅದನ್ನು ಕೊಟ್ಟು ಎಲ್ಲರನ್ನೂ ಸಂತೋಷಗೊಳಿಸು.

**ಕಾಂಚುಕೀಯು:**—ಅಪ್ಪಣೆ. (ತಪಸ್ವಿಗಳ ಕಡೆಗೆ ತಿರುಗಿ) ಎಲೈ, ಆಶ್ರಮವಾಸಿಗಳಾದ ತಪಸ್ವಿಗಳಿರಾ, ಕೇಳಿರಿ; ಕೇಳಿರಿ. ಮಗಧರಾಜನ ಮಗಳಾದ ಪೂಜ್ಯಳಾದ ನಮ್ಮ ಪದ್ಮಾವತಿಯು, ತಮ್ಮ ವಿಶ್ವಾಸದಿಂದ ನಂಬುಗೆ ಹುಟ್ಟಿದವಳಾಗಿ, ಧರ್ಮಾರ್ಥವಾದ ದಾನದಿಂದ ಎಲ್ಲರನ್ನೂ ಸಂತೈಸುತ್ತಾಳೆ. ಆದುದರಿಂದ,

ಆವಂಗಧ್ಯಯನಂ ಸಮಾಪ್ತಿಸಿದನಿಷ್ಟಂ ಸದ್ಗುರು
ಸ್ತೋಮಕೇ- ।
ನಾವಂ ಬಟ್ಟೆಯನಿಚ್ಛಿಸಂ ಕೊಡಮನಾವಂ ಮೇಣ್
ಯಥಾ ನಿಶ್ಚಿತಂ ॥
ಭೂವಧ್ವೀಶತನೂಜೆ, ಧರ್ಮರತೆಯಾತ್ಮಾನುಗ್ರಹಂ
ಬೇಳ್ಪಳಿಂ- ।
ದಾವಂಗಾವುದಭೀಷ್ಟಮುಯ್ ನುಡಿವುದಿನ್ನಾರಾರ್ಗ
ದೇನೀವುದು? ॥ ೮ ॥

**ಯೌಗಂಧರಾಯಣ:**—(ತನ್ನಲ್ಲಿ) ಅಹಾ! ಹಂಚಿಕೆಯು ತೋಚಿತು! ಇದೀಗ ಒಳ್ಳೆಯ ಸಮಯ! (ಪ್ರಕಾಶವಾಗಿ) ಮಹನೀಯರೇ, ನಾನು ಯಾಚಕನು.

**ಪದ್ಮಾವತಿ:**—ನಾನು ತಪೋವನಕ್ಕೆ ಬಂದುದು ಸುದೈವದಿಂದ ಸಾರ್ಥಕವಾಯಿತು.

**ತಾಪಸಿ:**—ಈ ಆಶ್ರಮದಲ್ಲಿರುವ ತಪಸ್ವಿಗಳೆಲ್ಲರೂ ಸಂತೃಪ್ತರು. ಇವನು ಆವನೋ ಒಬ್ಬ ಆಗಂತುಕನಾಗಿರಬೇಕು.

**ಕಾಂಚುಕೀಯ:**—ಮಹಾತ್ಮರೇ, ತಮ್ಮ ಬಯಕೆ ಏನು?

**ಯೌಗಂಧರಾಯಣ:**—ಇವಳು ನನ್ನ ತಂಗಿ, ಇವಳ ಗಂಡನು ದೇಶಾಂತರಕ್ಕೆ ಹೋಗಿದ್ದಾನೆ. ಇವಳನ್ನು ಕೆಲವು ಕಾಲದವರೆಗೆ ತಾವು ಪರಿಪಾಲಿಸಬೇಕೆಂದು ಕೋರುತ್ತೇನೆ. ಯಾಕಂದರೆ,

ಧನಮೆನಗದು ಬೇಡಂ ವಸ್ತ್ರಭೋಗಂಗಳುಂ ಜೀ- ।
ವನಕೆನು ತಿರಿದಾನಿಂತಾದೆನಲ್ಲಂ ವಿರಕ್ತಂ ॥
ಅನುವಿನಿವಳೆಯೆನ್ನಾ ತಂಗಿಯಾ ಶೀಲದಾ ಪಾ ।
ಲನಮನೆಸಗಲಾರ್ಪಳ್ ಧೀರೆ ಧರ್ಮಪ್ರಚಾರೆ ॥ ೯ ॥

**ವಾಸವದತ್ತೆ:**—(ತನ್ನಲ್ಲಿ) ಆಹಾ! ಪೂಜ್ಯನಾದ ಯೌಗಂಧರಾಯಣನು ನನ್ನನ್ನು ಇಲ್ಲಿ ಇಟ್ಟು ಹೋಗಲು ಬಯಸುತ್ತಾನೆ. ಆಗಲಿ. ಮಾಡಬಾರದುದನ್ನು ಆತನು ಮಾಡುವವನಲ್ಲ.

**ಕಾಂಚುಕೀಯು:**—ಪೂಜ್ಯಳೇ, ಈತನ ಬೇಡಿಕೆಯು ಘನವಾಗಿದೆ. ಆದುದರಿಂದ ಅದನ್ನು ಹೇಗೆ ಅಂಗೀಕರಿಸೋಣ? ಯಾಕೆಂದರೆ,

ಪದುಳಂ ಪಣಮುಂ ತಪಮುಂ ।
ಪದುಳಂ ಪ್ರಾಣಂಗಳಂ ಕುಡಲ್ ಪದುಳಂ ಮೇಣ್ ॥
ಪದುಳಮುಳಿದೆಲ್ಲಮುಂ ಗಡ! ।
ಸುದುಷ್ಕರಂ ಪೊರೆವುದನ್ಯರಿಟ್ಟುದನೆಮ್ಮೊಳ್ ॥ ೧೦ ॥

**ಪದ್ಮಾವತಿ:**—ಪೂಜ್ಯನೇ, ಮೊದಲು ಆರಾರಿಗೆ ಏನೇನು ಬೇಕೆಂದು ಡಂಗುರ ಹೊಡಿಸಿ, ಈಗ ಹೀಗೆ ಆಲೋಚನೆ ಮಾಡುವದು ಸರಿಯಲ್ಲ. ಇವರು ಹೇಳಿದಂತೆನಡೆಯಲಿಕ್ಕೆ ಬೇಕು.

**ಕಾಂಚುಕೀಯು:**—ಸರಿ; ಇದು ತಮಗೆ ಅನುರೂಪವಾಗಿಯೇ ಇದೆ.

**ಚೇಟಿ:**—ದಿಟವನ್ನೇ ಆಚರಿಸುವ ನಮ್ಮ ಭರ್ತೃದಾರಿಕೆಯು ಬಹುಕಾಲ ಬಾಳಲಿ.

**ತಾಪಸಿ:**—ಭದ್ರೇ, ಉದ್ದಂಡಾಯುಷ್ಮತಿಯಾಗು.

**ಕಾಂಚುಕೀಯು:**—ಪೂಜ್ಯಳೇ, ಅಪ್ಪಣೆ. (ಮುಂದಕ್ಕೆ ಬಂದು) ಪೂಜ್ಯರೇ, ನಿಮ್ಮ ತಂಗಿಯನ್ನು ಕಾಪಾಡುವುದಕ್ಕೆ ನಮ್ಮ ಒಡತಿಯು ಒಪ್ಪಿದ್ದಾಳೆ.

**ಯೌಗಂಧರಾಯಣ:**—ಪೂಜ್ಯಳಾದ ಪದ್ಮಾವತಿಯಿಂದ ಅನುಗೃಹೀತೆಯಾದೆನು. (ವಾಸವದತ್ತೆಯನ್ನು ಕುರಿತು) ಮಗಳೇ, ಆರ್ಯೆಯ ಹತ್ತರ ನಡೆ.

**ವಾಸವದತ್ತೆ:**—(ತನ್ನಲ್ಲಿ) ಏನು ಮಾಡಲಿ? ಇಗೋ, ಮಂದಭಾಗಿನಿಯು ನಡೆಯುವೆನು.

**ಪದ್ಮಾವತಿ:**—ಆಗಲಿ, ಆಗಲಿ; ಇವಳು ಇನ್ನು ನಮ್ಮವಳಾದಳು.

**ತಾಪಸಿ:**—ಈಕೆಯ ರೂಪವನ್ನು ನೋಡಿ ಇವಳಾದರೂ ರಾಜಕುಮಾರಿಯೆಂದೇ ಊಹಿಸುವೆನು.

**ಚೇಟಿ:**—ತಾವು ದಿಟವನ್ನೇ ಹೇಳಿದಿರಿ. ನಾನಾದರೂ ಇವಳು ಮೊದಲು ಸೌಖ್ಯವನ್ನನುಭವಿಸಿದವಳೆಂದು ತಿಳಿಯುತ್ತೇನೆ.

**ಯೌಗಂಧರಾಯಣ:**—(ತನ್ನಲ್ಲಿ) ಅಹಹಾ! ಈಗ ನನ್ನ ಅರ್ಧ ಕೆಲಸವು ಮುಗಿಯಿತು. ಮೊದಲು ಮಂತ್ರಿಗಳ ಮುಂದೆ ಹೇಳಿದಂತೆಯೇ ಈಗ ಸಂಭವಿಸಿತು. ಮುಂದೆ ಒಡೆಯನು ಅರಸುತನವನ್ನು ಪಡೆದ ಬಳಿಕ, ಪೂಜ್ಯೆಯಾದ ವಾಸವದತ್ತೆಯನ್ನು ಅವನ ಬಳಿಗೆ ಕರೆದೊಯ್ಯುವ ನನಗೆ, ಮಗಧರಾಜನ ಮಗಳಾದ ಈ ಪದ್ಮಾವತಿಯು ಸಾಕ್ಷಿಣಿಯಾಗುವಳು. ಯಾಕೆಂದರೆ, ಈ ಪದ್ಮಾವತಿಯು

ಅರಸಂಗೆ ಮಡದಿಯಪ್ಪಳೆ- ।
ಡರನೊರೆದುದು ಪಿಂತೆ ದಿಟವೆ ಜೋಯಿಸರದರಿಂ ॥
ನೆರೆನಂಬಿ ನಡೆದಪೆಂ ಸಿ- ।
ದ್ಧರ ನಿಶ್ಚಿತ ವಾಕ್ಯಮನದು ಮೀರದು ದೈವಂ ॥ ೧೧ ॥

(ಅನಂತರ ಬ್ರಹ್ಮಚಾರಿಯು ಬರುತ್ತಾನೆ.)

**ಬ್ರಹ್ಮಚಾರಿ:**—(ಮೇಲಕ್ಕೆ ನೋಡಿ) ಮಧ್ಯಾಹ್ನವಾಯಿತು. ಬಹಳೇ ದಣಿದಿದ್ದೇನೆ. ಆದರೆ ವಿಶ್ರಾಂತಿಗೋಸ್ಕರ ಎಲ್ಲಿ ಕುಳಿತುಕೊಳ್ಳಲಿ? (ಮುಂದಕ್ಕೆ ನಡೆದು) ಓಹೋ, ಸರಿ; ನೆರೆಯಲ್ಲಿಯೇ ತಪೋವನವಿರಲಿಕ್ಕೆ ಬೇಕು. ಯಾಕೆಂದರೆ,

ಏಗಳ್ ಸಂತತಮಭೀತಿಯಿಂ ಚರಿಸುಗುಂ ವಿಶ್ವಾಸದಿಂ
ಜಿಂಕೆಗಳ್ ।
ಪೂಗಾಯ್ತುಂಬಿದ ಕೊಂಬೆಯುಳ್ಳ ಗಿಡುಗುಂಪೆಲ್ಲಂ
ದಯಾರಕ್ಷಿತಂ ॥
ಗೋಗಳ್ ಮೇಣ್ ಕಪಿಲಾನ್ವಿತಂಗಳವಿತಂ
ದಿಗ್ದೇಶಮುಕ್ಷೇತ್ರಮಿಂ ।
ತೀಗಳ್ ಸಂದೆಯುಮೇಂ? ತಪೋವನಮೆ ಧೂಮಂ
ತಾಮನೇಕಾಶ್ರಯಂ॥

ಆದುದರಿಂದ ಹೋಗುವೆನು. (ಹೋದಂತೆ ನಟಿಸಿ) ಅಹಾ! ಈ ಮನುಷ್ಯನು ಆಶ್ರಮವಿರುದ್ಧನಾಗಿದ್ದಾನೆ. (ಬೇರೆ ಕಡೆಗೆ ನಿಟ್ಟಿಸಿ) ಆದರೆ ತಪಸ್ವಿಗಳೂ ಇಲ್ಲಿ ಇದ್ದಾರೆ. ಆದುದರಿಂದ ಮುಂದಕ್ಕೆ ಹೋಗಲು ಭಯವಿಲ್ಲ. (ತುಸು ಮುಂದಕ್ಕೆ ನಡೆದು) ಅಹಾ! ಹೆಂಗಸರು!!

**ಕಾಂಚುಕೀಯು:**—ನಿಶ್ಶಂಕೆಯಿಂದ ಪ್ರವೇಶಿಸಬೇಕು. ಆಶ್ರಮಪದವು ಸರ್ವರಿಗೂ ಸಾಧಾರಣವಾದುದು.

**ವಾಸವದತ್ತೆ:**—ಉಃ!

**ಪದ್ಮಾವತಿ:**—ಅಹಾ! ಪೂಜ್ಯೆಯು ಎರಡನೆಯ ಗಂಡಸರ ನೋಟವನ್ನು ತಪ್ಪಿಸಿಕೊಳ್ಳುತ್ತಾಳೆ. ಆಗಲಿ. ಇವಳನ್ನು ನಾನು ಚೆನ್ನಾಗಿ ಕಾಪಾಡಬೇಕಲ್ಲವೇ?

**ಕಾಂಚುಕೀಯು:**—ಪೂಜ್ಯನೇ, ನಾವು ಮೊದಲೇ ಇಲ್ಲಿಗೆ ಬಂದವರು. ಆತಿಥ್ಯವನ್ನು ಸ್ವೀಕರಿಸಬೇಕು.

**ಬ್ರಹ್ಮಚಾರಿ:**—(ಆಚಮನ ಮಾಡಿ) ಆಗಲಿ; ಆಗಲಿ. ದಣಿವು ಆರಿತು.

**ಯೌಗಂಧರಾಯಣಃ**—ಪೂಜ್ಯರೇ, ಎಲ್ಲಿಂದ ಬಂದಿರಿ? ಎಲ್ಲಿಗೆ ಹೋಗಬೇಕು? ತಮ್ಮ ಸ್ಥಳವಾವುದು?

**ಬ್ರಹ್ಮಚಾರಿಃ**—ಪೂಜ್ಯರೇ, ಕೇಳಿರಿ. ರಾಜಗೃಹದಿಂದ ಬಂದೆನು. ವೇದಗಳ ಅರ್ಥವನ್ನು ತಿಳಿದುಕೊಳ್ಳುವುದಕ್ಕೋಸ್ಕರ, ವತ್ಸದೇಶದ ಲಾವಾಣಕವೆಂಬ ಪಟ್ಟಣದಲ್ಲಿ ಇರುತ್ತಿದ್ದೆನು.

**ವಾಸವದತ್ತೆಃ**—(ತನ್ನಲ್ಲಿ) ಅಹಾ! ಲಾವಾಣಕ ಪಟ್ಟಣವು!! ಲಾವಾಣಕವೆಂಬ ಹೆಸರನ್ನು ಕೇಳಿ ನನ್ನ ಸಂತಾಪವು ಮತ್ತೆ ಹೊಸದಾಯಿತು.

**ಯೌಗಂಧರಾಯಣಃ**—ಈಗ ತಮ್ಮ ವಿದ್ಯಾಭ್ಯಾಸವು ಮುಗಿಯಿತೋ?

**ಬ್ರಹ್ಮಚಾರಿಃ**—ಇನ್ನೂ ಇಲ್ಲ.

**ಯೌಗಂಧರಾಯಣಃ**—ಹಾಗಾದರೆ, ಈಗಲೇ ಇಲ್ಲಿ ಬರುವುದಕ್ಕೆ ಕಾರಣವೇನು?

**ಬ್ರಹ್ಮಚಾರಿಃ**—ಅಲ್ಲಿ ದಾರುಣವಾದ ಒಂದು ದುಃಖವು ಪ್ರಾಪ್ತವಾಯಿತು.

**ಯೌಗಂಧ.**—ಅದಾವುದು?

**ಬ್ರಹ್ಮಚಾರಿಃ**—ಅಲ್ಲಿ ಉದಯನನೆಂಬ ಅರಸನಿದ್ದಾನೆ.

**ಯೌಗಂಧ.**—ಅಹುದು. ಪೂಜ್ಯನಾದ ಉದಯನನ ಹೆಸರನ್ನು ಕೇಳಿ ಬಲ್ಲೆನು. ಅವನ ಸಮಾಚಾರವೇನು?

**ಬ್ರಹ್ಮಚಾರಿಃ**—ಅವಂತಿರಾಜನ ಮಗಳಾದ ವಾಸವದತ್ತೆಯೆಂಬವಳು ಆತನಿಗೆ ಅತ್ಯಂತ ಪ್ರೇಮಾಸ್ಪದೆಯಾದ ಹೆಂಡತಿ.

**ಯೌಗಂಧರಾಯಣಃ**—ಅಹುದು. ಆ ಮೇಲೆ?

**ಬ್ರಹ್ಮಚಾರಿಃ**—ಆ ಅರಸನು ಬೇಟೆಗೆ ಹೋದಾಗ ಪಟ್ಟಣಕ್ಕೆ ಬೆಂಕಿ ಹತ್ತಿ, ವಾಸವದತ್ತೆಯು ಅದಕ್ಕೆ ತುತ್ತಾದಳು.

**ವಾಸವದತ್ತೆ**:—(ತನ್ನಲ್ಲಿ) ಸುಳ್ಳು; ಸುಳ್ಳು; ತೀರ ಸುಳ್ಳು. ಮಂದಭಾಗಿನಿಯು ಬದುಕಿದ್ದೇನೆ.

**ಯೌಗಂಧರಾಯಣ**:—ಆ ಮೇಲೆ ಏನಾಯಿತು?

**ಬ್ರಹ್ಮಚಾರಿ**:—ಆ ಮೇಲೆ ಅವಳನ್ನು ಉಳಿಸುವುದಕ್ಕೋಸ್ಕರ ಯೌಗಂಧರಾಯಣನೆಂಬ ಮಂತ್ರಿಯು ಆ ಬೆಂಕಿಯಲ್ಲಿ ಹಾರಿಕೊಂಡನು.

**ಯೌಗಂಧ.**:—ನಿಜ; ಹಾರಿಕೊಂಡನಂತೆ! ಆ ಮೇಲೆ?

**ಬ್ರಹ್ಮಚಾರಿ**:—ಅರಸನು ಅಡವಿಯಿಂದ ತಿರುಗಿ ಬಂದು, ಆ ಸುದ್ದಿಯನ್ನು ಕೇಳಿ ಅವರಿಬ್ಬರ ಅಗಲುವಿಕೆಯಿಂದ ಸಂತಪ್ತನಾಗಿ, ಅದೇ ಬೆಂಕಿಯಲ್ಲಿ ಬಿದ್ದು ಜೀವವನ್ನು ಕಳೆದುಕೊಳ್ಳುವುದಕ್ಕೆ ಸಿದ್ಧನಾಗಲು, ಅತ್ಯಂತ ಪ್ರಯತ್ನದಿಂದ ಅಮಾತ್ಯರು ಅವನನ್ನು ತಡೆದರು.

**ವಾಸವದತ್ತೆ**:—(ತನ್ನಲ್ಲಿ) ಬಲ್ಲೆನು. ನನ್ನ ವಿಷಯದಲ್ಲಿದ್ದ ಆರ್ಯಪುತ್ರನ ಪ್ರೇಮವನ್ನು ಬಲ್ಲೆನು.

**ಯೌಗಂಧ**:—ಬಳಿಕ ಏನಾಯಿತು?

**ಬ್ರಹ್ಮಚಾರಿ**:—ಅನಂತರ, ಅವಳು ಮೈಮೇಲೆ ಇಟ್ಟುಕೊಂಡಿದ್ದ, ಮತ್ತು ಅರ್ಧಮರ್ಧ ಸುಟ್ಟು ಹೋದ ತೊಡವುಗಳನ್ನು ಅಪ್ಪಿಕೊಂಡು ಅರಸನು ಮೂರ್ಛೆ ಹೊಂದಿದನು.

**ಎಲ್ಲರೂ**:—ಹಾ! ಹಾ!! ಹಾ!!!

**ವಾಸವದತ್ತೆ**:—(ತನ್ನಲ್ಲಿ) ಯೌಗಂಧರಾಯನು ಸಮೃದ್ಧವಾದ ಮನೋರಥವುಳ್ಳವನಾಗಲಿ. (ಅಳುತ್ತಾಳೆ.)

**ಚೇಟಿ**:—ಭರ್ತೃದಾರಿಕೇ, ಈ ಪೂಜ್ಯೆಯು ಅಳುತ್ತಿರುವಳಲ್ಲ!

**ಪದ್ಮಾವತಿ**:—ಅಹಹಾ! ಎರಡನೆಯವರ ದುಃಖವನ್ನು ಕೇಳಿ ಕಾತರೆಯಾಗುವ ಸ್ವಭಾವದವಳು!

**ಯೌಗಂಧರಾಯಣ**:—ಅಹುದಹುದು ಮೊದಲಿನಿಂದಲೂ ನನ್ನ ತಂಗಿಯ ಸ್ವಭಾವವೇ ಅಂತಹುದು! ಆ ಮೇಲಾಮೇಲೆ?

ಬ್ರಹ್ಮಚಾರಿ:—ಆಮೇಲೆ ಮೆಲ್ಲಮೆಲ್ಲನೆ ಎಚ್ಚರವುಳ್ಳವನಾದನು.

ಪದ್ಮಾವತಿ:—ಸುದೈವದಿಂದ ಬದುಕಿದನು. ಮೂರ್ಛೆ ಹೊಂದಿದನೆಂಬುದನ್ನು ಕೇಳಿ ನನ್ನ ಹೃದಯವು ಶೂನ್ಯವಾಗಿತ್ತು.

ಯೌಗಂಧರಾಯಣ:—ಮುಂದೆ ಏನಾಯಿತು?

ಬ್ರಹ್ಮಚಾರಿ:—ಆಮೇಲೆ ನೆಲದ ಮೇಲೆ ಹೊರಳಾಡುವುದರಿಂದ ಧೂಳಿ ಮುಸುಕಿದ ಮೈಯುಳ್ಳವನಾದ ಅರಸನು "ಹಾ! ವಾಸವದತ್ತೇ!" "ಅಯ್ಯೋ! ಅವಂತಿರಾಜಪುತ್ರೀ!" "ಅಹಾ! ಪ್ರಿಯೇ!" "ಹಾಯ್ ಹಾಯ್! ಪ್ರಿಯಶಿಷ್ಯೇ!" ಎಂಬುದಾಗಿ ಏನನ್ನೋ ಬಡಬಡಿಸಹತ್ತಿದನು. ಬಹಳವೇಕೆ? ಆತನಿಗೆ

ಸರಿಯಲ್ಲ ಚಕ್ಕವಕ್ಕಿಗ- ।
ೞಿರದಂತಹ ಪೆಸರನಾಂತ ಪೆಂಡಿರನಗಲ್ದರ್ ॥
ಅರಿವನೆರೆಯನಾವಳನಿಂ- ।
ತುರೆ ನೇಹದೆ ಧನ್ಯೆ ಸತ್ತೊಡಂ ಬರ್ದುಕಿದ
ಪಳ್ ॥ ೧೩ ॥

ಯೌಗಂಧರಾಯಣ:—ಅವನನ್ನು ಸರಿಯಾದ ಸ್ಥಿತಿಗೆ ತರುವುದಕ್ಕೆ ಒಬ್ಬ ಅಮಾತ್ಯನೂ ಯತ್ನಮಾಡಲಿಲ್ಲವೇ?

ಬ್ರಹ್ಮಚಾರಿ:—ರುಮಣ್ವಂತನೆಂಬ ಅಮಾತ್ಯನು ಅರಸನ ಮನೋವಿಕಾರವನ್ನು ಹೋಗಲಾಡಿಸುವುದಕ್ಕೆ ಬಹಳವಾಗಿ ಪ್ರಯತ್ನಮಾಡಿದನು. ಆತನು,

ನಿರುತಂ ರೋದನಕಾಂತಿಹೀನಮುಖನಂತಾಹಾರ
ಸಂತ್ಯಾಗಿ ಭೂ ।

ವರದುಃಖಕ್ಕೆ ಸಮಾನಮಾಪನಿಸುವಂ ದೇಹಕ್ಕೆ
ಸಂಸ್ಕಾರಮಂ ||
ಇರುಳೊಳ್ ಮೋಹ್ ಪಗಲೊಳ್ ಗಡಾ! ಎಸಗುವಂ
ಯತ್ನಂಗಳಿಂ ಸೇವೆಯಂ |
ಮರಣಂಬೊರ್ದಿದೊಡಾ ನೃಪಾಲನಿವನೀಗಳ್ ಸತ್ತ
ಪಂ ನಿಕ್ಕುವಂ || ೧೪ ||

ವಾಸವದತ್ತೆ:—(ತನ್ನಲ್ಲಿ) ಸುದೈವದಿಂದ ಆರ್ಯಪು ತ್ರನು ರುಮಣ್ವಂತನ ರಕ್ಷಣೆಯನ್ನು ಹೊಂದಿದನು.

ಯೌಗಂಧರಾಯಣ:—(ತನ್ನಲ್ಲಿ) ಅಹಾ! ರುಮ ಣ್ವಂತನು ದೊಡ್ಡ ಹೊರೆಯನ್ನು ಹೊತ್ತಿದ್ದಾನೆ. ಯಾಕಂದರೆ,

ಶ್ರಮರಹಿತಮೆನ್ನ ಭಾರಂ |
ಶ್ರಮಯುಕ್ತಮವಂಗೆಯೀಗಳೊದವಿದ ಭಾರಂ ||
ಕ್ಷಮೆಯೊಡೆಯನಾರ್ಗಧೀನಂ |
ಸಮನಿಕುವಾತಂಗೆ ಸರ್ವಮುಂ ಸ್ವಾಧೀನಂ ||೧೫||

(ಪ್ರಕಾಶವಾಗಿ) ಈಗ ಆ ರಾಜನು ಚೆನ್ನಾಗಿದ್ದಾನೆಯೇ?

ಬ್ರಹ್ಮಚಾರಿ:—ಈಗಿನ ಸುದ್ದಿಯನ್ನು ನಾನರಿಯೆನು. "ಇಲ್ಲಿ ಅವಳೊಡನೆ ನಗುತ್ತಿದ್ದೆನು; ಇಲ್ಲಿ ಅವಳ ಸಂಗಡ ಮಾತ ನಾಡುತ್ತಿದ್ದೆನು; ಇಲ್ಲಿ ಅವಳನ್ನು ಕೂಡಿಕೊಂಡು ಸಂತೋಷ ದಿಂದಿದ್ದೆನು; ಇಲ್ಲಿ ಅವಳ ಮೇಲೆ ಸಿಟ್ಟಾದೆನು; ಇಲ್ಲಿ ಅವಳೊಡನೆ ಮಲಗುತ್ತಿದ್ದೆನು;" ಈ ಪ್ರಕಾರವಾಗಿ ವಿಲಾಪಮಾಡುವ ಆ ರಾಜನನ್ನು, ಅತ್ಯಂತ ಪ್ರಯತ್ನಪೂರ್ವಕವಾಗಿ ಆ ಪಟ್ಟಣ ದಿಂದ ಬೇರೆ ಕಡೆಗೆ ಕರೆದುಕೊಂಡು ಹೋದರು. ಆ ಮೇಲೆ ನಕ್ಷತ್ರಗಳೂ ಚಂದ್ರನೂ ಇಲ್ಲದ ಆಗಸದಂತೆ ಆ ಊರು ಅರಮ ನೇಯವಾಯಿತು. ಆದುದರಿಂದ ನಾನೂ ಅಲ್ಲಿಂದ ಹೊರಟೆನು.

**ತಾಪಸಿ:**—ಆಗಂತುಕನಾದ ಇವನಿಂದಲೂ ಇಷ್ಟೊಂದು ಹೊಗಳಿಸಿಕೊಳ್ಳುವ ಈ ಅರಸನು ನಿಜವಾಗಿಯೂ ಗುಣವಂತನು.

**ಚೇಟಿ:**—ಭರ್ತೃದಾರಿಕೇ, ಎರಡನೆಯ ಹೆಂಗಸನ್ನು ಆತನು ಪ್ರೀತಿಸಲಿಕ್ಕಿಲ್ಲವೇ?

**ಪದ್ಮಾವತಿ:**—(ತನ್ನಲ್ಲಿ) ನನ್ನ ಹೃದಯದೊಡನೆ ಕೂಡಿಯೇ ಆಲೋಚನೆಯನ್ನು ಮಾಡಿ ಹೇಳಿದೆ.

**ಬ್ರಹ್ಮಚಾರಿ:**—ಇನ್ನು ತಾವು ನನಗೆ ಅಪ್ಪಣೆಯನ್ನು ಕೊಡುವುದಾಗಬೇಕು. ಹೊರಡುತ್ತೇನೆ.

**ಇಬ್ಬರೂ:**—ಅರ್ಥಸಿದ್ಧಿಗೋಸ್ಕರ ಹೊರಡುವುದಾಗಲಿ.

**ಬ್ರಹ್ಮಚಾರಿ:**—ಹಾಗೆಯೇ ಆಗಲಿ.

[ಹೊರಡುತ್ತಾನೆ.

**ಯೌಗಂಧರಾಯಣ:**—ಬಳ್ಳೆಯದು. ಪೂಜ್ಯೆಯಿಂದ ಅನುಗ್ರಹಿಸಲ್ಪಟ್ಟ ನಾನಾದರೂ ಹೋಗಲಿಚ್ಛಿಸುತ್ತೇನೆ.

**ಕಾಂಚುಕೀಯ:**—ಪೂಜ್ಯೆಯಾದ ಪದ್ಮಾವತಿಯು ನಮ್ಮ ತಿಯನ್ನು ಪಡೆದು ಹೋಗಬಯಸುವಿರಲ್ಲವೇ?

**ಪದ್ಮಾವತಿ:**—ತಾನಿಲ್ಲದಿರುವುದರಿಂದ ತಮ್ಮ ತಂಗಿಗೆ ಹೇಗೆ ಹೇಗೋ ಆಗಬಹುದು.

**ಯೌಗಂಧರಾಯಣ:**—ಸಜ್ಜನರ ಬಳಿಯಲ್ಲಿರುವುದರಿಂದ ಆಕೆಗೆ ಹಾಗೇನೂ ಆಗಲಾರದು. (ಕಾಂಚುಕೀಯನನ್ನು ನೋಡಿ) ಪೂಜ್ಯನೇ, ಇನ್ನು ಹೋಗುವೆನು.

**ಕಾಂಚುಕೀಯ:**—ಆಗಲಿ. ಹೋಗಿಬರಬಹುದು.

**ಯೌಗಂಧರಾಯಣ:**—ಹಾಗೆಯೇ ಆಗಲಿ. ಬರುತ್ತೇನೆ.

[ಹೊರಡುತ್ತಾನೆ.

**ಕಾಂಚುಕೀಯ:**—ಒಳಗೆ ಹೋಗಲಿಕ್ಕೆ ಇದು ತಕ್ಕ ಕಾಲವು.

ಪದ್ಮಾವತಿ:—ಪೂಜ್ಯರೇ, ಎರಗುತ್ತೇನೆ.

ತಾಪಸಿ:—ಮಗಳೇ, ತಕ್ಕವನಾದ ಗಂಡನನ್ನು ಪಡೆ.

ವಾಸವದತ್ತೆ:—ಪೂಜ್ಯೆಯೇ, ನಮಸ್ಕರಿಸುತ್ತೇನೆ.

ತಾಪಸಿ:—ನೀನಾದರೂ ಬೇಗನೇ ತಕ್ಕ ಗಂಡನನ್ನು ಹೊಂದು.

ವಾಸವದತ್ತೆ:—ಅನುಗ್ರಹಿಸಲ್ಪಟ್ಟೆನು.

ಕಾಂಚುಕೀಯು:—ಪೂಜ್ಯೆಯೇ, ಹೀಗೆ ದಯಮಾಡಿಸಬೇಕು. ಈಗಲಾದರೋ,

ನೀರಂ ಪೊಕ್ಕಪುದೀಗಳೀ ಮುನಿಜನಂ ಗೂಡಂ
ಗಡಾ! ಪಕ್ಕಿ ಕಾಂ- ।
ತಾರಂ ತುಂಬಿತು ಧೂಮದಿಂದನಲನುಂ ದೀಪ್ತಂ
ಗಡಾ! ಶೋಭಿಪಂ ॥
ಸೂರಂ ದೂರದೆ ಬಿಳ್ದಪಂ ಕದಿರ್ಗಳಂ ಸಂಕೋಚಿ
ಸುತ್ತಂ ಗಡಾ! ।
ತೇರಂ ನಿಲ್ಲಿಸಿ ಮಂದಮಸ್ತಗಿರಿಯಂ ತಾನಿಂತವಂ
ಪತ್ತುವಂ ॥ ೧೬ ॥

[ ಎಲ್ಲರೂ ಹೋಗುತ್ತಾರೆ.

ಮೊದಲನೆಯ ಅಂಕವು ಮುಗಿಯಿತು.

---

# ಎರಡನೆಯ ಅಂಕವು.

( ಚೇಟಿಯು ಬರುತ್ತಾಳೆ. )

**ಚೇಟಿ**:—ಕುಂಜರಿಕೇ, ಕುಂಜರಿಕೇ, ಭರ್ತೃದಾರಿಕೆಯಾದ ಪದ್ಮಾವತಿಯು ಎಲ್ಲಿದ್ದಾಳೆ? ( ಆಕಾಶದ ಕಡೆಗೆ ನೋಡಿ ) ಏನು ಹೇಳುತ್ತೀ? ಪದ್ಮಾವತಿಯು ಜಾದಿಯ ಬಳ್ಳಿಯ ಹಂದರದ ಬಳಿಯಲ್ಲಿ ಚಂಡಾಡುತ್ತಿದ್ದಾಳೆಂದೋ? ಹಾಗಾದರೆ, ಅವಳ ಹತ್ತಿರ ಹೋಗುತ್ತೇನೆ. ಅಹಾ! ಇದೋ, ಪದ್ಮಾವತಿಯು ತಿರುವುಮುರುವಾದ ಕಿವಿದೊಡವುಗಳುಳ್ಳವಗಳಾಗಿಯೂ, ಆಟದಿಂದುಂಟಾದ ಬೆವರಿನ ಹನಿಗಳಿಂದ ಅಂದವಾಗಿ ತೋರುವ ಮತ್ತು ದಣಿವಿನಿಂದ ರಮ್ಯವಾದ ನೋಟವುಳ್ಳ ಮುಖದಿಂದ ಕೂಡಿದವಳಾಗಿಯೂ, ಚಂಡನ್ನಾಡುತ್ತ ಇತ್ತಕಡೆಗೇ ಬರುತ್ತಿದ್ದಾಳೆ. ಆದುದರಿಂದ ಅವಳ ಹತ್ತಿರ ಹೋಗುತ್ತೇನೆ.

[ ಹೋಗುತ್ತಾಳೆ.

( ಇದು ಪ್ರವೇಶಕವು. )

( ಬಳಿಕ ಪರಿವಾರದೊಡನೆಯೂ, ವಾಸವದತ್ತೆಯೊಡನೆಯೂ ಕೂಡಿದ ಪದ್ಮಾವತಿಯು ಚಂಡನ್ನಾಡುತ್ತ ಪ್ರವೇಶಿಸುತ್ತಾಳೆ. )

**ವಾಸವದತ್ತೆ**:—ಸಖೀ, ಇದು ನಿನ್ನ ಚಂಡು.

**ಪದ್ಮಾವತಿ**:—ಆರ್ಯೆ, ಇನ್ನು ಚಂಡಿನಾಟ ಸಾಕು.

**ವಾಸವದತ್ತೆ**:—ಸಖೀ, ಬಹುಕಾಲದವರೆಗೆ ಚಂಡನ್ನಾಡಿ, ಹೆಚ್ಚಾಗಿ ಕೆಂಪಾಗಿರುವ ನಿನ್ನ ಕೈಗಳು ಎರಡನೆಯವರ ಕೈಗಳಂತೆ ತೋರುತ್ತಿವೆ.

**ಚೇಟಿ**:—ಭರ್ತೃದಾರಿಕೇ, ಆಡು; ಆಡು. ಎಳೆಯತನದಿಂದ ಕಮನೀಯವಾದ ಈ ಕಾಲವನ್ನು ಸಂತಸದಿಂದ ಕಳೆ.

**ಪದ್ಮಾವತಿ:**—ಆರ್ಯೆ, ನನ್ನನ್ನು ಅಣಕಿಸಬೇಕೆಂದು ಯೋಚಿಸುವೆಯಾ?

**ವಾಸವದತ್ತೆ:**—ಇಲ್ಲ; ಇಲ್ಲ. ಸಖೀ, ಇಂದು ನೀನು ಹೆಚ್ಚಾಗಿ ಚಂದಕಾಣುತ್ತೀ? ಇಂದು ನಿನ್ನ ಸುತ್ತಲೂ ವರನ ಮುಖವನ್ನೇ ಕಂಡ ಹಾಗಾಗುತ್ತದೆ.

**ಪದ್ಮಾವತಿ:**—ಸಾಕು. ಇನ್ನು ನನಗೆ ಅಪಹಾಸಮಾಡಬೇಡ.

**ವಾಸವದತ್ತೆ:**— ಮಹಾಸೇನನ ಸೊಸೆಯಾಗುವವಳೇ, ಇಗೋ ಸುಮ್ಮನಾದೆನು.

**ಪದ್ಮಾವತಿ:**—ಮಹಾಸೇನನಾರು?

**ವಾಸವದತ್ತೆ:**—ಉಜ್ಜಯಿನಿಯ ಒಡೆಯನಾದ ಪ್ರದ್ಯೋತನೆಂಬ ಅರಸನಿದ್ದಾನೆ. ಆತನ ದಂಡು ಉಳಿದ ಅರಸರ ದಂಡಿಗಿಂತಲೂ ಬಹಳ ಹೆಚ್ಚಾಗಿರುವದರಿಂದ ಆತನಿಗೆ ಮಹಾಸೇನನೆಂದೂ ಹೆಸರು.

**ಚೇಟಿ:**—ಭರ್ತೃದಾರಿಕೆಯು. ಆ ಅರಸನೊಡನೆ ಸಂಬಂಧವನ್ನು ಮಾಡಲೆಳಿಸುವದಿಲ್ಲ.

**ವಾಸವದತ್ತೆ:**—ಹಾಗಾದರೆ ಇನ್ನಾರೊಡನೆ ಮಾಡಬಯಸುವಳು?

**ಚೇಟಿ:**—ವತ್ಸರಾಜನಾದ ಉದಯನನ ಗುಣಗಳನ್ನು ಭರ್ತೃದಾರಿಕೆಯು ಬಯಸುತ್ತಾಳೆ.

**ವಾಸವದತ್ತೆ:**—(ತನ್ನಲ್ಲಿ) ಆರ್ಯಪುತ್ರನನ್ನು ಮದುವೆಯಾಗಲಿಚ್ಛಿಸುತ್ತಾಳೆ. (ಪ್ರಕಾಶವಾಗಿ) ಅದೇಕೆ?

**ಚೇಟಿ:**—ಏಕೆಂದರೆ, ಉದಯನನು ಕೃಪಾವಂತನೆಂದು.

**ವಾಸವದತ್ತೆ:**—(ತನ್ನಲ್ಲಿ) ನಾನಾದರೂ ಮೊದಲು ಹೀಗೆಯೇ ಉನ್ಮತ್ತೆಯಾದೆನು.

**ಚೇಟಿ**:—ಭರ್ತೃದಾರಿಕೇ, ಆ ರಾಜನು ಒಂದುವೇಳೆ ವಿರೂಪ ನಾಗಿದ್ದರೆ?

**ವಾಸವದತ್ತೆ**:—ಇಲ್ಲ; ಇಲ್ಲ. ಆತನು ಸುಂದರನೇ ಆಗಿದ್ದಾನೆ.

**ಪದ್ಮಾವತಿ**:—ಅದು ನಿನಗೆ ಹೇಗೆ ಗೊತ್ತು?

**ವಾಸವದತ್ತೆ**:—(ತನ್ನಲ್ಲಿ) ಆರ್ಯಪುತ್ರನಲ್ಲಿರುವ ಪ್ರೇಮ ವಿಶೇಷದಿಂದ ಪ್ರಕೃತಾನುಗುಣವಾದ ಆಚಾರವನ್ನು ಮೀರಿದೆನು. ಈಗ ಏನು ಮಾಡಲಿ? ಓಹೋ, ತಿಳಿಯಿತು. (ಪ್ರಕಾಶವಾಗಿ) ಸಖೀ, ಉಜ್ಜಯಿನಿಯ ಜನರು ಹೀಗೆ ಹೇಳುವುದನ್ನು ಕೇಳಿದ್ದೇನೆ.

**ಪದ್ಮಾವತಿ**:—ತಕ್ಕುದು, ತಕ್ಕುದು. ಉಜ್ಜಯಿನಿಯ ಜನರಿಗೆ ಆತನು ದುರ್ಲಭನಲ್ಲ. ಸುರೂಪತ್ವವು ಎಲ್ಲ ಜನರ ಮನಸ್ಸಿಗೂ ಹೃದ್ಯವೇ ಆಗಿರುತ್ತದೆ.

(ಆ ಮೇಲೆ ಧಾತ್ರಿಯು ಬರುತ್ತಾಳೆ.)

**ಧಾತ್ರಿ**:—ಭರ್ತೃದಾರಿಕೆಗೆ ವಿಜಯವಾಗಲಿ. ಭರ್ತೃದಾರಿಕೇ ನಿನ್ನನ್ನು ಕೊಟ್ಟರು.

**ವಾಸವದತ್ತೆ**:— ಆರ್ಯೇ, ಯಾರಿಗೆ?

**ಧಾತ್ರಿ**:—ವತ್ಸರಾಜನಾದ ಉದಯನನಿಗೆ.

**ವಾಸವದತ್ತೆ**:—ಆ ರಾಜನು ಕುಶಲಿಯಾಗಿದ್ದಾನೆಯೇ?

**ಧಾತ್ರಿ**:—ಕುಶಲಿಯಾಗಿರುವ ಆತನೇ ಇಲ್ಲಿಗೆ ಬಂದು, ಭರ್ತೃದಾರಿಕೆಯನ್ನೀಗ ಮಾತಿನಿಂದ ಪರಿಗ್ರಹಿಸಿದನು.

**ವಾಸವದತ್ತೆ**:—ಹಾ! ಅತ್ಯಂತ ಭೀತಿಯು!!

**ಧಾತ್ರಿ**:—ಈ ವಿಷಯದಲ್ಲಿ ಅಂತಹ ಭೀತಿಯಾವುದು?

**ವಾಸವದತ್ತೆ**:—ಏನೂ ಇಲ್ಲ; ಹಾಗೆ ಸಂತಾಪವನ್ನುಂಟು ಮಾಡಿ, ಉದಾಸೀನನಾಗುತ್ತಾನೆ.

ಧಾತ್ರಿ:—ಆರ್ಯೆ, ಮಹಾತ್ಮರ ಹೃದಯಗಳು ಶಾಸ್ತ್ರಾನುಸಾರಿಗಳಾಗಿರುವುದರಿಂದ, ಸುಲಭವಾಗಿಯೇ ಪೂರ್ವಸ್ಥಿತಿಗೆ ತಿರುಗತಕ್ಕವುಗಳಾಗಿರುತ್ತವೆ.

**ವಾಸವದತ್ತೆ**:—ಆರ್ಯೆ, ಆತನು ತಾನೇ ವರಿಸಿದನೇ?

**ಧಾತ್ರಿ**:--ಇಲ್ಲ; ಇಲ್ಲ. ಬೇರೆ ಕೆಲಸಕ್ಕೋಸುಗ ಇಲ್ಲಿ ಬಂದಾಗ ಆತನ ಕುಲವನ್ನೂ, ವಿದ್ಯೆಯನ್ನೂ ರೂಪವನ್ನೂ ನೋಡಿ, ನಮ್ಮ ಮಹಾರಾಜರು ತಾವೇ ಆತನನ್ನು ಪ್ರಾರ್ಥಿಸಿದರು.

**ವಾಸವದತ್ತೆ**:— (ತನ್ನಲ್ಲಿ) ಹೀಗೆಯೇ? ಹಾಗಾದರೆ ಆರ್ಯಪುತ್ರನಲ್ಲಿ ಅಪರಾಧವಿಲ್ಲ.

(ಎರಡನೆಯ ಚೇಟಿಯು ಬರುತ್ತಾಳೆ.)

**ಚೇಟಿ**:—ತ್ವರೆಮಾಡಿರಿ; ತ್ವರೆಮಾಡಿರಿ. ಇಂದೇ ಶುಭನಕ್ಷತ್ರವಿದೆ. ಈಹೊತ್ತೇ ಮದುವೆಯ ಸಮಾರಂಭವನ್ನು ತೀರಿಸಿಬಿಡಬೇಕೆಂದು ಯಜಮಾನತಿಯವರು ಹೇಳಿದ್ದಾರೆ.

**ವಾಸವದತ್ತೆ**:—(ತನ್ನಲ್ಲಿ) ಹೆಚ್ಚು ಹೆಚ್ಚಾಗಿ ತ್ವರೆಮಾಡಿದಂತೆ ನನ್ನ ಹೃದಯದಲ್ಲಿ ಕತ್ತಲೆಯು ಹೆಚ್ಚುತ್ತಿದೆ.

**ಧಾತ್ರಿ**:—ಭರ್ತೃದಾರಿಕೆಯೇ, ದಯಮಾಡಿಸಬೇಕು.

[ ಎಲ್ಲರೂ ಹೋಗುತ್ತಾರೆ.

ಎರಡನೆಯ ಅಂಕವು ಮುಗಿಯಿತು.

---

# ಮೂರನೆಯ ಅಂಕವು.



( ಅನಂತರ ಚಿಂತೆಮಾಡುತ್ತಿರುವ ವಾಸವದತ್ತೆಯು ಪ್ರವೇಶಿಸುತ್ತಾಳೆ. )

**ವಾಸವದತ್ತೆ:**—ಮದುವೆಯ ಸಂತಸದಿಂದ ಕೂಡಿದ, ಅನೇಕ ಬಂಧುಜನರುಳ್ಳ ಅಂತಃಪುರದ ಚತುಶ್ಶಾಲೆಯಲ್ಲಿ ಪದ್ಮಾವತಿಯನ್ನು ಬಿಟ್ಟು ಈ ಪ್ರಮದವನಕ್ಕೆ ಬಂದೆನು. ಇನ್ನು ಅದೃಷ್ಟದಿಂದ ಪ್ರಾಪ್ತವಾದ ದುಃಖವನ್ನು ಶಾಂತಮಾಡಿಕೊಳ್ಳುವೆನು. ( ಮುಂದಕ್ಕೆ ನಡೆದು ) ಅಯ್ಯೋ ! ಅತ್ಯಂತ ಭೀತಿಯು !! ಆರ್ಯಪುತ್ರನು ಕೂಡ ಎರಡನೆಯವನಾದನಲ್ಲ!!! ( ಸ್ವಲ್ಪ ಯೋಚಿಸಿ ) ಇಲ್ಲಿ ಕೂಡ್ರುವೆನು. ( ಕುಳಿತ) ಹೆಣ್ಣು ಚಕ್ರವಕ್ಕಿಯು ಧನ್ಯವಾದುದು. ಯಾಕಂದರೆ, ಗಂಡನನ್ನು ಅಗಲಿದರೆ ಅದು ಬದುಕುವುದಿಲ್ಲ. ನಾನಾದರೋ ಪ್ರಾಣಗಳನ್ನು ಬಿಡಲಿಲ್ಲ. ಆರ್ಯಪುತ್ರನನ್ನು ನೋಡುವೆನೆಂಬ ಆಶೆಯಿಂದ ಮಂದಭಾಗಿನಿಯು ಬದುಕಿದ್ದೇನೆ.

( ಅನಂತರ ಹೂಗಳನ್ನು ತೆಗೆದುಕೊಂಡು ಚೇಟಿಯು ಬರುತ್ತಾಳೆ. )

**ಚೇಟಿ:**—ಪೂಜ್ಯೆಯಾದ ಆವಂತಿಕೆಯು ಎಲ್ಲಿ ಹೋದಳು? ಅಹಾ! ದುಗುಡದಿಂದ ಶೂನ್ಯಹೃದಯೆಯಾದ ಇವಳು ತೊಡವುಗಳನ್ನಿಟ್ಟುಕೊಳ್ಳದೆ ಇದ್ದರೂ ಮಂಜಿನಕಾಂತಿಯಿಂದ ವ್ಯಾಪ್ತವಾದ ಚಂದ್ರಲೇಖೆಯಂತೆ ಸುಂದರಿಯಾಗಿ ತೋರುವ ವೇಷವನ್ನು ಧರಿಸಿ, ಗಂಧಫಲೀವೃಕ್ಷದ ಬುಡದಲ್ಲಿರುವ ಕಲ್ಲಿನ ಗದ್ದುಗೆಯ ಮೇಲೆ ಕುಳಿತುಕೊಂಡಿದ್ದಾಳೆ. ಆದುದರಿಂದ ಅವಳ ಬಳಿಗೆ

ಹೋಗುತ್ತೇನೆ. (ಮುಂದಕ್ಕೆ ಹೋಗಿ) ಆರ್ಯೇ, ಆವಂತಿಕೇ, ಎಷ್ಟು ಹೊತ್ತಿನವರೆಗೆ ನಿನ್ನನ್ನು ಹುಡುಕಬೇಕು?

**ವಾಸವದತ್ತೆ:**—ಇದೇನು? ನನ್ನನ್ನು ಅಷ್ಟೇಕೆ ಹುಡುಕಿದೆ?

**ಚೇಟಿ:**—ನೀನು ದೊಡ್ಡ ಕುಲದಲ್ಲಿ ಹುಟ್ಟಿದವಳೂ, ಸ್ನಿಗ್ಧೆಯೂ, ಜಾಣೆಯೂ, ಆಗಿರುತ್ತೀ; ಆದ್ದುದರಿಂದ ಪೂಜ್ಯೆಯು ಈ ಹೂಗಳಿಂದ ಮಾಲೆಯನ್ನು ಕಟ್ಟಬೇಕೆಂದು ನಮ್ಮ ಯಜಮಾನಿತಿಯು ಹೇಳಿದ್ದಾಳೆ.

**ವಾಸವದತ್ತೆ:**—ಇದನ್ನಾರಿಗೋಸುಗ ಹೆಣೆಯಬೇಕು?

**ಚೇಟಿ:**—ನಮ್ಮ ಭರ್ತೃದಾರಿಕೆಗೋಸ್ಕರ.

**ವಾಸವದತ್ತೆ:**—(ತನ್ನಲ್ಲಿ) ಇದನ್ನೂ ನಾನು ಮಾಡಬೇಕಾಯಿತೇ? ಅಯ್ಯೋ! ದೇವತೆಗಳು ದಯಾಹೀನರು!!

**ಚೇಟಿ:**—ಪೂಜ್ಯೇ, ಈಗ ಎರಡನೆಯದನ್ನು ಯೋಚಿಸಬೇಡ. ಅಳಿಯದೇವರು ಮಣಿಭೂಮಿಯಲ್ಲಿ ಸ್ನಾನಮಾಡುತ್ತಲಿದ್ದಾರೆ. ಆದುದರಿಂದ ಬೇಗನೇ ಮಾಲೆಯನ್ನು ಪೋಣಿಸು.

**ವಾಸವದತ್ತೆ:**—(ತನ್ನಲ್ಲಿ) ಎರಡನೆಯದನ್ನು ಯೋಚಿಸಬಾರೆನು. (ಪ್ರಕಾಶವಾಗಿ) ಸಖೀ, ಅಳಿಯದೇವರನ್ನು ನೋಡಿದೆಯಾ?

**ಚೇಟಿ:**—ಅಹುದು. ಭರ್ತೃದಾರಿಕೆಯ ಸ್ನೇಹದಿಂದಲೂ ನಮ್ಮ ಕುತೂಹಲದಿಂದಲೂ ನೋಡಿದೆವು.

**ವಾಸವದತ್ತೆ:**—ಹೇಗಿದ್ದಾರೆ?

**ಚೇಟಿ:**—ಪೂಜ್ಯೆಯೇ, ಕೇಳು. ಇಂತಹನನ್ನು ಇದಕ್ಕೂ ಮೊದಲು ನಾವು ಎಂದೂ ನೋಡಿದ್ದಿಲ್ಲ.

**ವಾಸವದತ್ತೆ**:—ಗೆಳತೀ, ಹೇಳು; ಹೇಳು. ಸುಂದರನಿದ್ದಾನೆಯೋ?

**ಚೇಟಿ**:—ಆತನು ಬಿಲ್ಲುಬಾಣಗಳಿಲ್ಲದ ಕಾಮದೇವನೆಂದೇ ಹೇಳಬಹುದು.

**ವಾಸವದತ್ತೆ**:—ಸಾಕು ಸಾಕು.

**ಚೇಟಿ**:—ಅದೇಕೆ ಸಾಕೆನ್ನುವೆ?

**ವಾಸವದತ್ತೆ**:—ಎರಡನೆಯ ಗಂಡಸರ ಬಣ್ಣನೆಯನ್ನು ಕೇಳುವುದು ತಕ್ಕುದಲ್ಲ.

**ಚೇಟಿ**:—ಇರಲಿ. ಆರ್ಯೆ, ಮಾಲೆಯನ್ನು ಬೇಗನೇ ಕಟ್ಟು.

**ವಾಸವದತ್ತೆ**:—ಇಗೋ, ಕಟ್ಟುತ್ತೇನೆ. ಹೂಗಳನ್ನು ತಾ.

**ಚೇಟಿ**:—ಪೂಜ್ಯೆಯೇ, ತೆಗೆದುಕೋ.

**ವಾಸವದತ್ತೆ**:—(ಹೂಗಳನ್ನು ಪಾತ್ರೆಯಿಂದ ಸುರುವಿ) ಈ ಔಷಧವು ಯಾವುದು?

**ಚೇಟಿ**:—ಅವಿಧವಾಕರಣವೆಂಬುದು.

**ವಾಸವದತ್ತೆ**:—ಇದನ್ನು ಪದ್ಮಾವತಿಗಾಗಿಯೂ, ನನಗಾಗಿಯೂ ಕಟ್ಟತಕ್ಕುದು. (ಪ್ರಕಾಶವಾಗಿ) ಈ ಔಷಧವು ಯಾವುದು?

**ಚೇಟಿ**:—ಸಪತ್ನೀಮರ್ದನವೆಂಬುದು.

**ವಾಸವದತ್ತೆ**:—ಇದನ್ನು ಪೋಣಿಸುವ ಆವಶ್ಯಕವಿಲ್ಲ.

**ಚೇಟಿ**:—ಅದೇಕೆ?

**ವಾಸವದತ್ತೆ**:—ಆತನ ಮೊದಲಿನ ಹೆಂಡತಿಯು ಸತ್ತುಹೋಗಿದ್ದಾಳೆ. ಆದುದರಿಂದ ಇದನ್ನು ಕಟ್ಟುವುದು ನಿಷ್ಪ್ರಯೋಜಕ.

( ಎರಡನೆಯ ಚೇಟಿಯು ಬರುತ್ತಾಳೆ. )

**ಚೇಟಿ:**—ಪೂಜ್ಯೆಯೇ, ತ್ವರೆಮಾಡು; ತ್ವರೆಮಾಡು. ಅಳಿಯದೇವರು ಸುವಾಸಿನಿಯರೊಡನೆ ಚತುಶ್ಶಾಲೆಯನ್ನು ಪ್ರವೇಶಿಸುತ್ತಾರೆ.

**ವಾಸವದತ್ತೆ:**—ಇಗೋ, ಆಯಿತು. ತೆಗೆದುಕೋ.

**ಚೇಟಿ:**—ಒಳ್ಳೆಯದು. ಪೂಜ್ಯೆಯೇ ನಾನು ಬರುತ್ತೇನೆ.

[ ಇಬ್ಬರೂ ಚೇಟಿಯರು ಹೋಗುತ್ತಾರೆ.

**ವಾಸವದತ್ತೆ:**— ಇವರಂತೂ ಹೋದರು. ಅಯ್ಯೋ! ಅತ್ಯಂತ ಭೀತಿಯು!! ಆರ್ಯಪುತ್ರನು ಕೂಡ ಎರಡನೆಯವನಾದನಲ್ಲ!!! ಅಯ್ಯೋ! ನಿದ್ದೆಯಾದರೂ ಬಂದರೆ, ಹಾಸುಗೆಯ ಮೇಲೆ ಮಲಗಿಕೊಂಡು ದುಃಖವನ್ನು ಕಳೆದುಕೊಳ್ಳುವೆನು.

[ ಹೊರಡುತ್ತಾಳೆ.

ಮೂರನೆಯ ಅಂಕವು ಮುಗಿಯಿತು.

---

# ನಾಲ್ಕನೆಯ ಅಂಕವು.

( ಅನಂತರ ವಿದೂಷಕನು ಪ್ರವೇಶಿಸುತ್ತಾನೆ. )

**ವಿದೂಷಕ:**—ಓಹೋ! ಪೂಜ್ಯನಾದ ವತ್ಸರಾಜನಿಗೆ ಇಷ್ಟವಾದ ಮತ್ತು ಮಂಗಲಕರವಾದ ಮದುವೆಯ ಸುಖಕರವಾದ ಕಾಲವು ಸುದೈವದಿಂದ ಪ್ರಾಪ್ತವಾಯಿತು. ಅಂತಹ ದುಃಖವೆಂಬ ಮಡುವಿನಲ್ಲಿ ಮುಳುಗಿದ ನಾವು ಮೇಲಕ್ಕೇಳಬಹುದೆಂದು ಅದಾವನು ತಿಳಿದಿದ್ದನು? ಇನ್ನು ಮೇಲೆ ಅರಮನೆಯಲ್ಲಿ ವಾಸಿಸುವೆನು; ಅಂತಃಪುರದ ಬಾವಿಗಳಲ್ಲಿ ಜಳಕ ಮಾಡುವೆನು; ಸ್ವಾಭಾವಿಕವಾಗಿ ಸವಿಯಾಗಿರುವ, ಉತ್ತಮವಾದ ಮೋದಕಾದಿ ಪದಾರ್ಥಗಳನ್ನು ತಿನ್ನುವೆನು. ಈ ಪ್ರಕಾರ ಅಪ್ಸರ ಸ್ತ್ರೀಯರ ಸಹವಾಸವಿಲ್ಲದ ಸ್ವರ್ಗಸುಖವನ್ನು ಅನುಭವಿಸುವೆನು. ಆದರೆ ಒಂದೇ ಒಂದು ದೋಷವಿದೆ. ನನ್ನ ಆಹಾರವು ಚೆನ್ನಾಗಿ ಅರಗುವುದಿಲ್ಲ. ಮೆತ್ತನ್ನ ಹಾಸಿಗೆಯ ಮೇಲೆ ಮಲಗಿದರೂ ನಿದ್ದೆ ಹತ್ತುವದಿಲ್ಲ. ವಾತರಕ್ತ ರೋಗವು ನನ್ನ ಸುತ್ತಲೂ ಹರಡಿದೆಯೋ, ಎಂಬಂತೆ ತೋರುತ್ತದೆ. ಅಯ್ಯೋ! ಜೇನೆಯಿಲ್ಲದೆ ಮನಬಂದಂತೆ ತಿನ್ನುವ ಸುಖವು ನನಗೆ ಇಲ್ಲ!

( ಆ ಮೇಲೆ ಚೇಟಿಯು ಬರುತ್ತಾಳೆ. )

**ಚೇಟಿ:**—ಪೂಜ್ಯನಾದ ವಸಂತಕನು ಎಲ್ಲಿ ಹೋದನು? ( ಮುಂದಕ್ಕೆ ನಡೆದು ಸುತ್ತಲೂ ನೋಡಿ ) ಇದೋ, ಇವನೇ ಆರ್ಯವಸಂತಕನು. ( ಹತ್ತರ ಹೋಗಿ ) ಪೂಜ್ಯನೇ, ವಸಂತಕಾ, ಎಷ್ಟು ಹೊತ್ತಿನವರೆಗೆ ನಿನ್ನನ್ನು ಹುಡುಕಬೇಕು?

**ವಿದೂಷಕ:**—( ನೋಡಿ ) ಭದ್ರೇ, ಅದೇಕೆ ನನ್ನನ್ನು ಹುಡುಕಿದೆ?

**ಚೇಟಿ:**—ಅಳಿಯದೇವರು ಸ್ನಾನಮಾಡಿದರೋ? ಎಂದು ನಮ್ಮ ಯಜಮಾನಿತಿಯು ಕೇಳಿದಳು.

ವಿದೂಷಕ:—ಪೂಜ್ಯೆಯು ಅದೇನು ಕಾರಣ ಕೇಳಿದಳು ?

ಚೇಟಿ:—ಬೇರೆ ಕಾರಣವೇನು? ಸುಮನೋವರ್ಣಕವನ್ನು ತರಬೇಕೆಂದು.

ವಿದೂಷಕ:—ಅಳಿಯದೇವರ ಸ್ನಾನವಾಯಿತು. ಪೂಜ್ಯೆಯು ಊಟವೊಂದನ್ನು ಬಿಟ್ಟು ಎಲ್ಲವನ್ನೂ ತರಲಿ.

ಚೇಟಿ:—ಊಟವನ್ನೇಕೆ ತರಕೂಡದು ?

ವಿದೂಷಕ:—ಕೋಗಿಲೆಗಳಿಗೆ ಕಣ್ಣಬೇನೆಯುಂಟಾಗು ವಂತೆ ನನಗೆ ಹೊಟ್ಟೆ ಬೇನೆಯುಂಟಾಗಿದೆ.

ಚೇಟಿ:—ಹಾಗೆಯೇ ಇರು.

ವಿದೂಷಕ:—ನೀನು ಹೊರಡು. ನಾನಾದರೂ ಪೂಜ್ಯನ ಬಳಿಗೆ ಹೋಗುತ್ತೇನೆ.

[ ಹೊರಡುತ್ತಾರೆ.

ಇದು ಪ್ರವೇಶಕವು.

(ಆ ಮೇಲೆ ಪರಿವಾರದೊಡನೆ ಕೂಡಿದ
ಪದ್ಮಾವತಿಯೂ ಆವಂತಿಕೆಯ
ವೇಷವನ್ನು ಹಾಕಿಕೊಂಡ ವಾಸವದತ್ತೆಯೂ ಬರುತ್ತಾರೆ.)

ಚೇಟಿ:—ಭರ್ತೃದಾರಿಕೆಯು ಪ್ರಮದವನಕ್ಕೆ ಬಂದ ಕಾರಣವೇನು ?

ಪದ್ಮಾವತಿ:—ಗೆಳತೀ, ಆ ಶೇಫಾಲಿಕಾಗುಲ್ಮ (ಅಡವಿಯ ಲಕ್ಕೀಗಿಡ)ಗಳು ಹೂ ಬಿಟ್ಟಿವೆಯೋ ಇಲ್ಲವೋ ನೋಡುತ್ತೇನೆ.

ಚೇಟಿ:—ಭರ್ತೃದಾರಿಕೇ, ಅವು ಹೂಗಳನ್ನು ಬಿಟ್ಟಿವೆ. ನಡು ನಡುವೆ ಹವಳಗಳನ್ನು ಪೋಣಿಸಿದ ಮುತ್ತಿನ ಸರದಂತೆ ಅವು ಹೂಗಳಿಂದ ದಟ್ಟೈಸಿತ್ತಾಗಿ ತುಂಬಿರುವವು.

ಪದ್ಮಾವತಿ:—ಸಖೀ, ಹಾಗಾದರೆ ಏಕೆ ತಡಮಾಡುವೆ!

ಚೇಟಿ:—ಹಾಗಾದರೆ, ಈ ಶಿಲಾಪಟದ ಮೇಲೆ ಭರ್ತೃದಾರಿ

ಕೆಯು ಒಂದು ಕ್ಷಣಹೊತ್ತು ಕುಳಿತುಕೊಳ್ಳುವದಾಗಬೇಕು. ಅಷ್ಟ ರಲ್ಲಿ ನಾನು ಹೂಗಳನ್ನು ಕೊಯ್ದು ತರುವೆನು.

**ಪದ್ಮಾವತಿ:**—ಆರ್ಯೆ, ಇಲ್ಲಿ ಕುಳಿತುಕೊಳ್ಳೋಣವೇ?

**ವಾಸವದತ್ತೆ:**—ಹುँ! ಹುँ!

[ ಇಬ್ಬರೂ ಕುಳಿತುಕೊಳ್ಳುತ್ತಾರೆ.

**ಚೇಟಿ:**—ಭರ್ತೃದಾರಿಕೇ, ನೋಡು; ನೋಡು. ಕೆಂಪು ಬಣ್ಣದ ಕುನಟೀಧಾತುವಿನ ಚೂರುಗಳಿಂದಲೋ ಎಂಬಂತೆ, ಶೇಫಾಲಿಕಾಕುಸುಮಗಳಿಂದ ತುಂಬಿದ ನನ್ನ ಬೊಗಸೆಯನ್ನು ನೋಡು.

**ಪದ್ಮಾವತಿ:**—ಅಹಹಾ! ಹೂಗಳು ವಿಚಿತ್ರವಾಗಿವೆ. ಪೂಜ್ಯೆಯೇ, ನೋಡು ನೋಡು.

**ವಾಸವದತ್ತೆ:**—ಅಹಹಾ! ಹೂಗಳು ಬಹಳೇ ಅಂದ ವಾಗಿವೆ.

**ಚೇಟಿ:**—ಭರ್ತೃದಾರಿಕೇ, ಇನ್ನೂ ಹೂಗಳನ್ನು ಕೊಯ್ಯಲೇ?

**ಪದ್ಮಾವತಿ:**—ಸಖೀ, ಬೇಡ; ಬೇಡ. ಇನ್ನು ಕೊಯ್ಯಬೇಡ.

**ವಾಸವದತ್ತೆ:**—ಗೆಳತೀ, ಬೇಡವೆಂದು ಏಕೆ ಹೇಳಿದೆ?

**ಪದ್ಮಾವತಿ:**—ಆರ್ಯಪುತ್ರನು ಇಲ್ಲಿಗೆ ಬಂದು ಈ ಕುಸುಮಸಮೃದ್ಧಿಯನ್ನು ನೋಡಿದರೆ, ಸಮ್ಮಾನಿತೆಯಾಗುವೆನು.

**ವಾಸವದತ್ತೆ:**—ಸಖೀ, ಗಂಡನು ನಿನ್ನ ಪ್ರೀತಿಗೆ ಪಾತ್ರನಾಗಿದ್ದಾನೆ.

**ಪದ್ಮಾವತಿ:**—ಆರ್ಯೆ, ತಿಳಿಯೆನು. ಆದರೆ ಆರ್ಯಪುತ್ರನ ಅಗಲುವಿಕೆಯಿಂದ ಉತ್ಕಂಠಿತೆಯಾಗುವೆನು.

**ವಾಸವದತ್ತೆ:**—(ತನ್ನಲ್ಲಿ) ನಾನು ದುಷ್ಕರವಾದುದನ್ನು ಮಾಡುತ್ತಲಿದ್ದೇನೆ. ಇವಳಾದರೂ ಹೀಗೆ ಹೇಳುವಳಲ್ಲ!

**ಚೇಟಿ:**—ಗಂಡನು ತನಗೆ ಪ್ರೀತಿಪಾತ್ರನೆಂದು ಭರ್ತೃದಾರಿಕೆಯು ಯೋಗ್ಯವಾದುದನ್ನೇ ಹೇಳಿದಳು.

**ಪದ್ಮಾವತಿ:**—ಆದರೆ ನನಗೆ ಸ್ವಲ್ಪ ಸಂದೇಹವುಂಟು.

**ವಾಸವದತ್ತೆ:**—ಅದೇನದೇನು?

**ಪದ್ಮಾವತಿ:**—ಆರ್ಯಪುತ್ರನು ನನಗೆ ಹೇಗೆ ಪ್ರೀಯಕರನೋ, ಹಾಗೆಯೇ ವಾಸವದತ್ತೆಗೂ ಎಂದು.

**ವಾಸವದತ್ತೆ:**—ಇನ್ನೂ ಹೆಚ್ಚಾಗಿಯೇ.

**ಪದ್ಮಾವತಿ:**—ನೀನು ಹೇಗೆ ಬಲ್ಲೆ?

**ವಾಸವದತ್ತೆ:**—(ತನ್ನಲ್ಲಿ) ಅಯ್ಯೋ! ಆರ್ಯಪುತ್ರನ ಮೇಲಿನ ಪ್ರೇಮವಿಶೇಷದಿಂದ ಪ್ರಕೃತಾನುಗುಣವಾದ ಆಚಾರವನ್ನು ಮರೆತೆನು. ಆಗಲಿ. ಹೀಗೆ ಹೇಳುವೆನು. (ಪ್ರಕಾಶವಾಗಿ) ಒಂದು ವೇಳೆ ಅಲ್ಪಸ್ನೇಹವಿದ್ದರೆ, ಆ ವಾಸವದತ್ತೆಯು ತನ್ನ ಜನರನ್ನು ಬಿಡುತ್ತಿದ್ದಿಲ್ಲ.

**ಪದ್ಮಾವತಿ:**—ಆಹುದು; ಸರಿ.

**ಚೇಟಿ:**—ಭರ್ತೃದಾರಿಕೇ, "ನಾನೂ ವೀಣೆಯುನ್ನು ಬಾರಿಸಲಿಕ್ಕೆ ಕಲಿಯುತ್ತೇನೆ" ಂದು ಗಂಡನಿಗೆ ಹೇಳು.

**ಪದ್ಮಾವತಿ:**—ಹಾಗೆಂದು ಆರ್ಯಪುತ್ರನಿಗೆ ಹೇಳಿದೆನು.

**ವಾಸವದತ್ತೆ:**—ಅದಕ್ಕೆ ಏನು ಹೇಳಿದನು?

**ಪದ್ಮಾವತಿ:**—ಏನೂ ಮಾತನಾಡದೆ, ನಿಟ್ಟುಸಿರು ಬಿಟ್ಟು ಸುಮ್ಮನಾದರು.

**ವಾಸವದತ್ತೆ:**—(ತನ್ನಲ್ಲಿ) ಇದು ನಿಜವಾಗಿದ್ದರೆ ನಾನು ಧನ್ಯೆ.

(ಆ ಮೇಲೆ ಅರಸನೂ ವಿದೂಷಕನೂ ಬರುತ್ತಾರೆ.)

**ವಿದೂಷಕ:**--ಸಮೃದ್ಧವಾದ ಹೂಗಳುಳ್ಳ ಬಂಧುಳವೃಕ್ಷದ ಪುಷ್ಪಗಳು ಎಲ್ಲೆಡೆಯಲ್ಲಿಯೂ ವಿರಳವಾಗಿ ಹರಡಿದ ಪ್ರಮದ ವನವು ಬಹಳೇ ಅಂದವಾಗಿದೆ. ಪೂಜ್ಯನೇ, ಹೀಗೆ ಹೀಗೆ ದಯ ಮಾಡಿಸಬೇಕು.

**ಅರಸು:**—ಗೆಳೆಯಾ, ವಸಂತಕಾ, ಇಗೋ ಇಗೋ ಬಂದೆನು.

ನಡೆಯಲ್ಕುಜ್ಜಯಿನೀಪುರಕ್ಕವಳೆಯಂ ಪೊರ್ದಲ್ಕೆಯು
ಲ್ಲೊಂದನಾಂ ।
ನಡೆನೋಡುತ್ತಮವಂತಿಪುತ್ರಿಯನನಂಗಂ ಪಂಚ
ಬಾಣಂಗಳಿಂ ॥
ಪೊಡೆದಂ ಮದ್ಹೃದಯಂ ಸಶಲ್ಯಮವರಿಂದಿನ್ನುಂ
ಪುನರ್ವಿದ್ಧನಾಂ ।
ಗಡವೈಗೋಲನೆಯಚ್ಚೊಡೆಂತುಮವನೆಚ್ಚಂ
ಷಷ್ಠನಾರಾಚವುಂ ॥ ೧ ॥

**ವಿದೂಷಕ:**—ಪೂಜ್ಯೆಯಾದ ಪದ್ಮಾವತಿಯು ಎಲ್ಲಿ ಹೋದಳು? ಲತಾಮಂಟಪಕ್ಕೆ ಹೋಗಿರಬಹುದು. ಇಲ್ಲವೆ, ಸರ್ಜಕ ಪುಷ್ಪದಿಂದ ವ್ಯಾಪ್ತವಾದ ಮತ್ತು ಹುಲಿದೊಗಲಿನಿಂದ ಮುಚ್ಚಿದಂತೆ ತೋರುವ ಪರ್ವತತಿಲಕವೆಂಬ ಶಿಲಾಪಟ್ಟಕಕ್ಕೆ ಹೋಗಿರಬಹುದು; ಅಥವಾ, ಹೆಚ್ಚಾಗಿ ಕಹಿಯಾದ ವಾಸನೆಯುಳ್ಳ ಏಳೆಲೆ ಬಾಳೆಯ ತೋಟಕ್ಕೆ ಹೋಗಿರಬಹುದು; ಇಲ್ಲವೆ, ಮೃಗಪಕ್ಷಿ ಸಮೂಹದ ಚಿತ್ರಗಳುಳ್ಳ ಮತ್ತು ಕಟ್ಟಿಗೆಯಿಂದ ಮಾಡಿದ ಕೃತ್ರಿಮಗಿರಿಗೆ ಹೋಗಿರಬಹುದು. ಅಹಹಾ! ಶರತ್ಕಾಲದ ಹಸನಾದ ಆಗಸದಲ್ಲಿ ಸಾವಧಾನವಾಗಿ ಹಾರಾಡುತ್ತಿರುವ ಮತ್ತು ಬಲಭದ್ರನ ಸ್ವಚ್ಛವಾದ ಬಾಹುಗಳಂತೆ ಮನೋಹರವಾದ ಈ ಸಾರಸಪಕ್ಷಿಗಳನ್ನು ನೋಡು.

ಅರಸು:--ಗೆಳೆಯನೇ, ಇವು ನನಗೆ ಹೀಗೆ ತೋರುತ್ತವೆ.

ಸರಳಂ ದಂತುರವುದ್ಧಂ।
ವಿರಳಂ ಸಪ್ತರ್ಷಿಕುಟಿಲವುಂ ವಿವಲನದೊಳ್॥
ಪರೆ ಬಿಡುವಹ್ಯುದರಾಚ್ಛಂ।
ಗೆರೆಯೆಂದರಿವೆಂ ನಭವನಿದಂ ವಿಭಜಿಸುವಾ ॥ ೨ ॥

ಚೇಟಿ: -ಭರ್ತೃದಾರಿಕೇ, ಉತ್ಪಲಮಾಲೆಯಂತೆ ಬೆಳ್ಳಗಾಗಿಯೂ, ರಮಣೀಯವಾಗಿಯೂ ಇರುವ ಮತ್ತು ಸಾವಧಾನವಾಗಿ ಹಾರಾಡುವ ಈ ಸಾರಸಪಕ್ಷಿಗಳನ್ನು ನೋಡು. ಅಹಹಾ! ಯಜಮಾನರು!!

ಪದ್ಮಾವತಿ:—ಅಹಾ! ಆರ್ಯಪುತ್ರನು! ಆರ್ಯೇ, ಆರ್ಯಪುತ್ರನ ದರ್ಶನವನ್ನು ತಪ್ಪಿಸಿಕೊಳ್ಳುತ್ತೇನೆ. ಆದುದರಿಂದ ಈ ಜಾದಿಯ ಬಳ್ಳಿಯ ಮಂಟಪದ ಒಳಗೆ ಹೋಗೋಣ.

ವಾಸವದತ್ತೆ:--ಆಗಲಿ.

[ ಲತಾಮಂಡಪವನ್ನು ಪ್ರವೇಶಿಸುತ್ತಾರೆ.

ವಿದೂಷಕ:—ಪೂಜ್ಯೆಯಾದ ಪದ್ಮಾವತಿಯು ಇಲ್ಲಿ ಬಂದು ಹೋಗಿರಬಹುದು.

ಅರಸು:--ಏತರ ಮೇಲಿಂದ ಹಾಗೆ ಹೇಳುವೆ?

ವಿದೂಷಕ:—ಕೊಯ್ದು ಕೂಡಿ ಹಾಕಿರುವ ಈ ಶೇಫಾಲಿಕಾಗುಚ್ಛಗಳನ್ನು ನೋಡು.

ಅರಸು:--ವಸಂತಕಾ, ಹೂಗಳು ಅತ್ಯಂತ ವಿಚಿತ್ರವಾಗಿವೆ.

ವಾಸವದತ್ತೆ:—(ತನ್ನಲ್ಲಿ) ವಸಂತಕನ ಮಾತುಗಳನ್ನು ಕೇಳಿ, ನಾನು ಉಜ್ಜಯಿನಿಯಲ್ಲಿಯೋ ಇರುವೆನೋ ಎಂದು ಭಾಸವಾಗುತ್ತದೆ.

ಅರಸು:—ವಸಂತಕಾ, ಇದೇ ಕಲ್ಲ ಮೇಲೆ ಕುಳಿತುಕೊಂಡು ಪದ್ಮಾವತಿಯನ್ನು ಪ್ರತೀಕ್ಷಿಸೋಣ.

ವಿದೂಷಕ:—ಹಾಗೆಯೇ ಆಗಲಿ. (ಕುಳಿತುಕೊಂಡು, ಮತ್ತೆ ಎದ್ದು ನಿಂತು) ಅಹಾ! ಶರದೃತುವಿನ ತೀಕ್ಷ್ಣವಾದ ಬಿಸಿಲು ತಡೆಯಲಸಾಧ್ಯವಾಗಿದೆ. ಆದುದರಿಂದ ಈ ಜಾದಿಯ ಮಂಟಪದ ಒಳಕ್ಕೆ ಹೋಗೋಣ.

ಅರಸು:—ಆಗಲಿ. ಮುಂದೆ ಮುಂದೆ ನಡೆ;

ವಿದೂಷಕ:—ಅಂತೆಯೇ ಆಗಲಿ.

[ ಇಬ್ಬರೂ ಹೊರಡುತ್ತಾರೆ.

ಪದ್ಮಾವತಿ:—ಪೂಜ್ಯನಾದ ವಸಂತಕನು ಎಲ್ಲವನ್ನೂ ಕೆಡಿಸಲಿಚ್ಛಿಸುತ್ತಾನೆ. ಈಗ ಏನು ಮಾಡೋಣ?

ಚೇಟಿ:—ಭರ್ತೃದಾರಿಕೇ, ಮಧುಪಾನದಲ್ಲಿ ಆಸಕ್ತವಾದ ತುಂಬಿಗಳುಳ್ಳ ಮತ್ತು ಇತರ ಲತೆಗಳಿಗೆ ಆಶ್ರಯಭೂತವಾದ ಈ ಮುಖ್ಯ ಲತೆಯನ್ನು ಅಲ್ಲಾಡಿಸಿ ಯಜಮಾನನ ಬರುವಿಕೆಯನ್ನು ತಡೆಯುತ್ತೇನೆ.

(ಚೇಟಿಯು ಬಳ್ಳಿಯನ್ನು ಅಲುಗಿಸುತ್ತಾಳೆ.)

ವಿದೂಷಕ:—ಹಾ! ಹಾ!!! ನಿಲ್ಲು; ನಿಲ್ಲು. ಸ್ವಲ್ಪ ನಿಲ್ಲು.

ಅರಸು:—ಏಕೆ?

ವಿದೂಷಕ:—ಈ ದುಷ್ಟಭ್ರಮರಗಳು ತೊಂದರೆಯನ್ನುಂಟು ಮಾಡುತ್ತವೆ.

ಅರಸು:—ಬೇಡ ಬೇಡ. ಹಾಗೆ ನುಡಿಯಬೇಡ. ತುಂಬಿಗಳಿಗೆ ಪೀಡೆಯನ್ನುಂಟು ಮಾಡಬೇಡ. ಯಾಕಂದರೆ,

ಸುಮರಸಮದಕಲದಲಿಗಳ್ ।
ಸುಮಶರಪೀಡಿತರಮಣಿರನುಪಗೂಢಂಗಳ್ ॥
ಗಮನವಿಷಣ್ಣಂಗಳ್ ಮೇಣ್ ।
ರಮಣೀರಹಿತಂಗಳಪ್ಪವೆನ್ನ ವೊಲೀಗಳ್ ॥ ೩ ॥

ಆದುದರಿಂದ ಇಲ್ಲಿಯೇ ಇರೋಣ.

**ವಿದೂಷಕ:**—ಹಾಗೆಯೇ ಆಗಲಿ.

[ ಇಬ್ಬರೂ ಕುಳಿತುಕೊಳ್ಳುತ್ತಾರೆ.

**ಚೇಟಿ:**—ಭರ್ತೃದಾರಿಕೇ, ನಾವೀಗ ಹೊರಗೆ ಹೋಗಲಿಕ್ಕೆ ಬಾರದಂತಾಯಿತು.

**ಪದ್ಮಾವತಿ:**—ಸುದೈವದಿಂದ ಆರ್ಯಪುತ್ರನು ಕುಳಿತು ಕೊಂಡನು.

**ವಾಸವದತ್ತೆ:**—(ತನ್ನಲ್ಲಿ) ಸುದೈವದಿಂದ ಆರ್ಯಪುತ್ರನು ಸ್ವಸ್ಥನಾಗಿದ್ದಾನೆ.

**ಚೇಟಿ:**—ಭರ್ತೃದಾರಿಕೇ, ಪೂಜ್ಯೆಯಾದ ವಾಸವದತ್ತೆಯ ದೃಷ್ಟಿಯು ಬಾಷ್ಪಮಯವಾಗಿದೆ.

**ವಾಸವದತ್ತೆ:**—ತುಂಬಿಗಳು ಇತ್ತಿಂದತ್ತ ಹಾರಾಡುವಾಗ, ಕಾಶಪುಷ್ಪದ ಹುಡಿಯು ಬಿದ್ದುದರಿಂದ ಕಣ್ಣಲ್ಲಿ ನೀರು ಬಂತು.

**ಪದ್ಮಾವತಿ:**—ಅಹುದು; ಸರಿ.

**ವಿದೂಷಕ:**—ಪೂಜ್ಯನೇ, ಈ ವನದಲ್ಲಿ ಸದ್ಯಕ್ಕೆ ಯಾರೂ ಇಲ್ಲ. ನಿನಗೊಂದು ವಿಷಯವನ್ನು ಕೇಳಬೇಕಾಗಿದೆ ಕೇಳಲಾ?

**ಅರಸು:**—ಬೇಕಾದ ಹಾಗೆ ಕೇಳು.

**ವಿದೂಷಕ:**—ಹಿಂದೆ ಇದ್ದ ವಾಸವದತ್ತೆಯು ನಿನಗೆ ಹೆಚ್ಚು ಪ್ರಿಯಕರೆಯೋ? ಈಗಿನ ಪದ್ಮಾವತಿಯೋ?

**ಅರಸು:**—ನೀನು ನನ್ನನ್ನು ಇಂತಹ ಭಯಂಕರವಾದ ಸಂಕಟದಲ್ಲಿ ಏಕೆ ಕೆಡವುತ್ತೀ?

**ಪದ್ಮಾವತಿ:**—ಸಖೀ, ಆರ್ಯಪುತ್ರನು ಎಂತಹ ಸಂಕಟ ದಲ್ಲಿ ಬಿದ್ದನು.

**ವಾಸವದತ್ತೆ**:—(ತನ್ನಲ್ಲಿ) ನಾನಾದರೋ, ಮಂದಭಾಗಿನಿ.

**ವಿದೂಷಕ**:—ಬಾಯಿಬಿಚ್ಚಿ ಹೇಳು. ಒಬ್ಬಳು ಸತ್ತು ಹೋಗಿದ್ದಾಳೆ; ಇನ್ನೊಬ್ಬಳೋ ಹತ್ತಿರದಲ್ಲಿಲ್ಲ.

**ಅರಸು**:–ಗೆಳೆಯನೆ, ಹೇಳಲಾರೆನು; ಹೇಳಲಾರೆನು. ನೀನಾದರೋ ವಾತುಗುಳಿ.

**ಪದ್ಮಾವತಿ**:—ಆರ್ಯಪುತ್ರನು ತನ್ನ ಅಭಿಪ್ರಾಯವನ್ನು ಹೀಗೆ ವ್ಯಕ್ತಬಡಿಸಿದನು.

**ವಿದೂಷಕ**:—ಇಗೋ, ಸತ್ಯದೇವರ ಆಣೆಯಿಂದ ಹೇಳುತ್ತೇನೆ ದಿಟವಾಗಿ ಯಾರ ಮುಂದೂ ಹೇಳುವುದಿಲ್ಲ. ಈಗಲೇ ನನ್ನ ನಾಲಿಗೆಯು ಪ್ರತಿರುದ್ಧವಾಗಿದೆ.

**ಪದ್ಮಾವತಿ**:—ಅಯ್ಯೋ! ಇವನ ದಡ್ಡತನವೇ? ಇಷ್ಟಾದರೂ ಇವನಿಗೆ ಅಭಿಪ್ರಾಯವು ತಿಳಿಯಲಿಲ್ಲ!

**ವಿದೂಷಕ**:—ಏನು? ನನಗೆ ಹೇಳುವುದಿಲ್ಲವೇ? ಹೇಳದೆ ಇದ್ದರೆ, ಈ ಶಿಲಾಪಟ್ಟಕದಿಂದ ಒಂದು ಹೆಜ್ಜೆಯನ್ನಾದರೂ ಮುಂದಕ್ಕೆ ಹೋಗಗೊಡುವುದಿಲ್ಲ.

**ಅರಸು**:—ಅಹಾ! ಬಲಾತ್ಕಾರವನ್ನು ಮಾಡುವೆಯಾ?

**ವಿದೂಷಕ**:—ಪ್ರಸನ್ನನಾಗು; ಪ್ರಸನ್ನನಾಗು. ದಿಟವನ್ನು ಹೇಳದಿದ್ದರೆ ನಿನ್ನ ಜೊತೆ ನನಗೆ ಬೇಡ.

**ಅರಸು**:—ಇನ್ನೇನು ಗತಿ? ಕೇಳು.

ಎನಗೆಯಿವಳ್ ಪದ್ಮಾವತಿ।
ಗುಣಸೌಂದರ್ಯಮಧುರತೆಯಿನತಿಮಾನ್ಯೆ ನಿಜಂ॥
ಮನಮುಂ ವಾಸವದತ್ತೆಯೊ।
ಳನುಬದ್ಧಂ ಸೆಳೆಯಲಾರಳಾದೊಡಮೆನ್ನಾ॥ ೪॥

**ವಾಸವದತ್ತೆ**:—(ತನ್ನಲ್ಲಿ) ಇರಲಿ; ಇರಲಿ. ನನ್ನ ದುಃಖಕ್ಕೆ ಸರಿಯಾದ ಫಲವು ದೊರೆಯಿತು. ಅಹಹಾ! ಇಲ್ಲಿ ಅಜ್ಞಾತ ರೀತಿಯಿಂದ ಇರುವುದರಿಂದ ಬಹಳ ಪ್ರಯೋಜನವು ಉಂಟಾಗುತ್ತಿದೆ.

**ಚೇಟಿ**:—ಯಜಮಾನರು ದಕ್ಷಿಣನಾಯಕರಲ್ಲ.

**ಪದ್ಮಾವತಿ**:—ಸಖೀ, ಬೇಡ; ಬೇಡ. ಹಾಗೆನ್ನಬೇಡ. ಆರ್ಯಪುತ್ರನು ದಕ್ಷಿಣನೇ ಅಹುದು. ಯಾಕೆಂದರೆ ಪೂಜ್ಯೆಯಾದ ವಾಸವದತ್ತೆಯ ಗುಣಗಳನ್ನು ಈಗಳೂ ಆತನು ನೆನಿಸುತ್ತಾನೆ.

**ವಾಸವದತ್ತೆ**:—ಭದ್ರೇ, ಕುಲವಧುವಿಗೆ ಸರಿಯಾದ ರೀತಿಯಲ್ಲಿಯೇ ಮಾತನಾಡಿದೆ.

**ಅರಸು**:—ಗೆಳೆಯಾ, ನಾನು ಹೇಳಿದೆನು. ಇನ್ನು ಮೇಲೆ ನೀನು ಹೇಳು. ಹಿಂದಿನ ವಾಸವದತ್ತೆಯು ನಿನಗೆ ಹೆಚ್ಚು ಪ್ರೀತಿಯವಳೋ, ಈಗಿನ ಪದ್ಮಾವತಿಯೋ?

**ಪದ್ಮಾವತಿ**:—ಆರ್ಯಪುತ್ರನು ವಸಂತಕನಾದನು.

**ವಿದೂಷಕ**:—ನನ್ನ ವ್ಯರ್ಥವಾದ ಮಾತಿನಿಂದೇನು ಪ್ರಯೋಜನ? ಪೂಜ್ಯರಾದ ಅವರಿಬ್ಬರೂ ನನಗೆ ಮಾನ್ಯರು.

**ಅರಸು**:—ಎಲೈ ಮೂರ್ಖನೇ, ಬಲಾತ್ಕಾರದಿಂದ ನನ್ನ ಅಭಿಪ್ರಾಯವನ್ನು ತಿಳಿದುಕೊಂಡು, ನೀನು ಮಾತ್ರ ಹೇಳದೆ ಇರುವೆಯಾ?

**ವಿದೂಷಕ**:—ಹಾಗಾದರೆ, ನನ್ನನ್ನೂ ಬಲಾತ್ಕಾರದಿಂದ ಕೇಳುತ್ತೀಯಾ?

**ಅರಸು**:—ಅಹುದು. ಬಲಾತ್ಕಾರದಿಂದಲೇ ಕೇಳುತ್ತೇನೆ.

**ವಿದೂಷಕ**:—ಹಾಗಾದರೆ, ನಾನು ಹೇಳುವುದಿಲ್ಲ.

**ಅರಸು:**—ಮಹಾಬ್ರಾಹ್ಮಣನೇ, ಪ್ರಸನ್ನನಾಗು; ಪ್ರಸನ್ನನಾಗು. ನಿನ್ನ ಮನಸ್ಸಿಗೆ ಬಂದಂತೆಯೇ ಹೇಳು.

**ವಿದೂಷಕ:**—ಈಗ ಹೇಳುತ್ತೇನೆ ಕೇಳು. ಪೂಜ್ಯೆಯಾದ ವಾಸವದತ್ತೆಯು ನನಗೆ ಹೆಚ್ಚು ಮಾನ್ಯೆಯು. ಪದ್ಮಾವತಿಯಾದರೂ ತರುಣಿಯೂ, ಸುಂದರಿಯೂ, ಸಿಟ್ಟಿಲ್ಲದವಳೂ, ಅಹಂಕಾರರಹಿತೆಯೂ, ಸವಿನುಡಿಯುವಳೂ, ಸರಲೆಯೂ ಆಗಿದ್ದಾಳೆ. ಆದರೆ ವಾಸವದತ್ತೆಯಲ್ಲಿ ಇನ್ನೊಂದು ವಿಶೇಷಗುಣವಿತ್ತು. ಅವಳು "ಆರ್ಯವಸಂತಕನು ಎಲ್ಲಿ ಹೋದನು?" ಎಂದು ಹುಡುಕಿ ಸವಿಯಾದ ಊಟವನ್ನು ನನಗೆ ಬಡಿಸುತ್ತಿದ್ದಳು.

**ವಾಸವದತ್ತೆ:**—(ತನ್ನಲ್ಲಿ) ಆಗಲಿ; ಆಗಲಿ. ವಸಂತಕನೇ ಈಗ ಅವಳನ್ನು ಸ್ಮರಿಸು.

**ಅರಸು:**—ಆಗಲಿ; ಆಗಲಿ; ವಸಂತಕನೇ, ಇದೆಲ್ಲವನ್ನೂ ವಾಸವದತ್ತೆಗೆ ಹೇಳುತ್ತೇನೆ.

**ವಿದೂಷಕ:**—ಅಯ್ಯೋ! ವಾಸವದತ್ತೆಯೋ? ಇನ್ನೆಲ್ಲಿಯ ವಾಸವದತ್ತೆ!!! ಅವಳು ಸತ್ತು ಎಷ್ಟೋ ದಿನಗಳಾದುವಲ್ಲವೇ?

**ಅರಸು:**—(ದುಃಖದಿಂದ) ಅಯ್ಯೊ! ವಾಸವದತ್ತೆಯು ಸತ್ತು ಹೋಗಿದ್ದಾಳೆ!

ಇದರಿಂ ಬಿನದದೆ ಮನವಾ।
ದುದು ವಾಸವದತ್ತೆಯಲ್ಲಿ ಸಕ್ತಮದೆನ್ನಾ॥
ಅದರಿಂ ಮೊದಲಭ್ಯಾಸದೆ।
ವದನದೆ ಪೊರಪೊಣ್ಮಿತಿದು ವಚನಮಂತೆ
ಯೆಕೇಳ್ ॥ ೫ ॥

**ಪದ್ಮಾವತಿ:**—ರಮಣೀಯವಾದ ಕಥಾನುಬಂಧನನ್ನು ದುಷ್ಟವಸಂತಕನು ಕೆಡಿಸಿದನು.

**ವಾಸವದತ್ತೆ**:—(ತನ್ನಲ್ಲಿ) ಆಗಲಿ; ಆಗಲಿ. ಪೂರ್ಣವಾಗಿ ನಂಬಿದ್ದೇನೆ. ಪರೋಕ್ಷದಲ್ಲಿ ಇಂತಹ ಮಾತುಗಳನ್ನಾಡುವ ಇವನೇ ನಿಜವಾದ ಪ್ರಿಯನು.

**ವಿದೂಷಕ**:—ಧೈರ್ಯವನ್ನು ತಾಳು; ಧೈರ್ಯವನ್ನು ತಾಳು. ದೈವವನ್ನು ಮೀರಲಿಕ್ಕಾಗುವುದಿಲ್ಲ. ಈಗಿನ ಕಾಲವೇ ಹೀಗಿರುವುದು.

**ಅರಸು**:—ಗೆಳೆಯನೇ, ನನ್ನ ಅವಸ್ಥೆಯು ನಿನಗೆ ಗೊತ್ತಾಗಲಾರದು. ಯಾಕೆಂದರೆ,

ಪ್ರೀತಿ, ದುಃಖಮುಳಿವಲ್ ದೃಢಾಶ್ರಯಂ।
ನೂತನಂ ನೆನೆದು ಶೋಕನಾಗುಗುಂ॥
ರೀತಿಯಿಂತಿಹದೊಳಿಕ್ಕಿ ಬಾಷ್ಪಮಂ।
ಚೇತಮಕ್ಕುಮನೃಣಂ ಪ್ರಸನ್ನಮಾಯ್ ॥ ೬ ॥

**ವಿದೂಷಕ**:—ಪೂಜ್ಯನೇ, ನಿನ್ನ ಮುಖವು ಕಣ್ಣೀರುಗಳಿಂದ ತೊಯ್ದು ಹೋಗಿದೆ. ಆದುದರಿಂದ ಮೋರೆಯನ್ನು ತೊಳೆದುಕೊಳ್ಳುವುದಕ್ಕೆ ನೀರನ್ನು ತರುತ್ತೇನೆ.

[ಹೋಗುತ್ತಾನೆ

**ಪದ್ಮಾವತಿ**:—ಆರ್ಯೆ, ಆರ್ಯಪುತ್ರನ ಮುಖವು ಕಣ್ಣೀರುಗಳ ಪಟಲದಿಂದ ಮುಚ್ಚಿಹೋಗಿದೆ. ಆದುದರಿಂದ ನಾವು ಇಲ್ಲಿಂದ ಹೊರಡೋಣ.

**ವಾಸವದತ್ತೆ**:—ಹಾಗೆಯೇ ಆಗಲಿ. (ಸ್ವಲ್ಪ ಯೋಚಿಸಿ,) ಅಥವಾ ನೀನು ಇಲ್ಲಿಯೇ ಇರು. ದುಃಖಿತನಾದ ಗಂಡನನ್ನು ಬಿಟ್ಟು ಹೋಗುವುದು ಸರಿಯಲ್ಲ. ಆದುದರಿಂದ ನಾನೊಬ್ಬಳೇ ಹೋಗುವೆನು.

**ಚೇಟಿ**:—ಪೂಜ್ಯಳು ಯೋಗ್ಯವಾದುದನ್ನೇ ಹೇಳಿದಳು. ಭರ್ತೃದಾರಿಕೇ, ಸಮೀಪಕ್ಕೆ ಹೋಗು.

**ಪದ್ಮಾವತಿ:**—ಅದೇಕೆ ಹೋಗಲಿ?

**ವಾಸವದತ್ತೆ:**—ಸಖೀ, ಹೋಗು.

[ ಎಂದು ಹೊರಟು ಹೋಗುತ್ತಾಳೆ.

( ಅನಂತರ ವಿದೂಷಕನು ಬರುತ್ತಾನೆ.

**ವಿದೂಷಕ:**—( ಕಮಲಪತ್ರದಲ್ಲಿ ನೀರನ್ನು ತೆಗೆದುಕೊಂಡು ಬಂದು ) ಅಹಾ! ಇವಳೇ ಪೂಜ್ಯೆಯಾದ ಪದ್ಮಾವತಿಯು!

**ಪದ್ಮಾವತಿ:**—ಆರ್ಯ, ವಸಂತಕಾ, ಏನಿದು.

**ವಿದೂಷಕ:**—ಇದು ಅದು; ಅದು ಇದು.

**ಪದ್ಮಾವತಿ:**—ಪೂಜ್ಯನೇ, ಹೇಳು; ಹೇಳು,

**ವಿದೂಷಕ:**—ಕಾಶಪುಷ್ಪದ ಧೂಳಿಯು ಗಾಳಿಯಿಂದ ಹಾರಿ, ಕಣ್ಣಲ್ಲಿ ಬಿದ್ದುದರಿಂದ ನಮ್ಮ ಪೂಜ್ಯನಾದ ರಾಜನ ಮುಖವು ಅಶ್ರುಗಳಿಂದ ವ್ಯಾಪ್ತವಾಗಿದೆ. ಆದುದರಿಂದ ಪೂಜ್ಯೆಯಾದ ನೀನು ಈ ಮುಖೋದಕವನ್ನು ತೆಗೆದುಕೋ?

**ಪದ್ಮಾವತಿ:**—( ತನ್ನಲ್ಲಿ ) ಅಹಹಾ! ದಕ್ಷಿಣನಾದ ಒಡೆಯನ ಸೇವಕನಾದರೂ ದಕ್ಷಿಣನೇ ಆಗಿದ್ದಾನೆ. ( ನೀರನ್ನು, ತೆಗೆದುಕೊಂಡು ಅರಸನ ಸಮೀಪಕ್ಕೆ ಹೋಗಿ ) ಆರ್ಯಪುತ್ರನಿಗೆ ವಿಜಯವಾಗಲಿ. ಇದು ಮುಖೋದಕವು.

**ಅರಸು:**—ಅಹಾ! ಪದ್ಮಾವತಿಯು! ( ತಡೆದು ) ವಸಂತಕಾ, ಏನಿದು?

**ವಿದೂಷಕ:**—( ಕಿವಿಯಲ್ಲಿ ) ಹೀಗೆ ಹೀಗೆ.

**ಅರಸು:**—ಸರಿ; ಸರಿ. ವಸಂತಕಾ ಸರಿ. (ಮುಖವನ್ನು ತೊಳೆದುಕೊಂಡು ಪದ್ಮಾವತೀ, ಕುಳಿತುಕೋ.

**ಪದ್ಮಾವತಿ:**—ಆರ್ಯಪುತ್ರನ ಅಪ್ಪಣೆಯಂತಾಗಲಿ.

[ ಕುಳಿತುಕೊಳ್ಳುತ್ತಾಳೆ.

ಅರಸುಃ—ಪದ್ಮಾವತೀ,

ಎರಲವಹನದಿಂ ಭಾಮಿನಿ ।
ಶರದಿಂದುವಿನಂತೆ ಬಿಳಿದು ಕಾಶವರಾಗಂ ॥
ಸುರಿದತ್ತೆನ್ನಯ ಕಣ್ಣೊ ಳ- ।
ದರಿಂದೆ ಕಣ್ಣೀರ್ಗಳಿಂದೆ ಮೊಗಮಿದು ಪೂರ್ಣಂ ॥ ೭ ॥

(ತನ್ನಲ್ಲಿ).

ಪೊಸತಾಗಿ ಮದುವೆ ನಿಂದಳ್ ।
ಬೆಸನಂದಳಿವಳ್ ತಿಳಿದು ಹುಡುಗೆ ದಿಟವಮನಿವಳ್ ॥
ನಿಸದ ಮೆರ್ದೆಗಾರ್ತಿಯೇ; ಹೆಂ- ।
ಗಸುವಾದೊಡಮೇಗಳಂಜುಗುಳಿ ತಾನಲ್ತೇ? ॥ ೮ ॥

ವಿದೂಷಕಃ—ಪೂಜ್ಯನಾದ ಮಗಧರಾಜನು ಪ್ರತಿದಿವಸ ಅಪರಾಹ್ಣಕಾಲದಲ್ಲಿ ನಿನ್ನನ್ನು ಮುಂದಿರಿಸಿಕೊಂಡು ಮಿತ್ರಜನರ ಸಂದರ್ಶನವನ್ನು ತೆಗೆದುಕೊಳ್ಳುವುದು ಪದ್ಧತಿಯಾಗಿದೆ. ಸತ್ಕಾರವು ಸತ್ಕಾರದಿಂದ ಸ್ವೀಕರಿಸಲ್ಪಟ್ಟು ಪ್ರೀತಿಯನ್ನು ಹುಟ್ಟಿಸುತ್ತದೆ. ಆದುದರಿಂದ ನೀನೀಗ ಹೊರಡಬೇಕು.

ಅರಸುಃ—ಅಹುದು; ನಿಜ ಅದು ನನ್ನ ಆದ್ಯಕರ್ತವ್ಯವು. (ಎದ್ದು)

ನಿರುತಂ ಸಜ್ಜನಗುಣ ಸ- ।
ತ್ಕರಣಂಗಳ ಕರ್ತೃಪುರುಷರಿರ್ಪರ್ ಪಲಬರ್ ॥
ಅರಿವರವುಗಳಂ ಮನದೊಳ್ ।
ವಿರಳರ್ ಪೊಡವಿಯೊಳಗೆಂದುಮಲ್ಲಂ ಸುಲಭರ್ ॥ ೯ ॥

[ ಎಲ್ಲರೂ ಹೊರಡುತ್ತಾರೆ.

ನಾಲ್ಕನೆಯ ಅಂಕವು ಮುಗಿಯಿತು.

---

# ಐದನೆಯ ಅಂಕವು.

( ಅನಂತರ ಪದ್ಮಿನಿಕೆಯು ಬರುತ್ತಾಳೆ. )

**ಪದ್ಮಿನಿಕೆ:**—ಮಧುಕರಿಕೇ, ಮಧುಕರಿಕೇ, ಬೇಗನೇ ಬಾ.

( ಮಧುಕರಿಕೆಯು ಬರುತ್ತಾಳೆ. )

**ಮಧುಕರಿಕೆ:**—ಸಖೀ, ಇಗೋ ಬಂದೆನು. ಏನು ಕೆಲಸ?

**ಪದ್ಮಿನಿಕೆ:**—ಸಖೀ, ಭರ್ತೃದಾರಿಕೆಯಾದ ಪದ್ಮಾವತಿಯು ತಲೆನೋವಿನಿಂದ ನರಳುತ್ತಿರುವಳೆಂಬುದು ನಿನಗೆ ಗೊತ್ತಿಲ್ಲವೇ?

**ಮಧುಕರಿಕೆ:**—ಅಹಾ! ಕಷ್ಟವು! ಕಷ್ಟವು!!

**ಪದ್ಮಿನಿಕೆ:**—ಸಖೀ, ಬೇಗಬೇಗನೇ ಹೋಗಿ ಪೂಜ್ಯೆಯಾದ ಅವಂತಿಕೆಯನ್ನು ಕರೆ. ಭರ್ತೃದಾರಿಕೆಯ ತಲೆನೋವನ್ನು ಮಾತ್ರ ಅವಳಿಗೆ ತಿಳಿಸು; ಅಂದರೆ ಅವಳೇ ಬರುವಳು.

**ಮಧುಕರಿಕೆ:**—ಸಖೀ, ಅವಳೇನು ಮಾಡುವಳು?

**ಪದ್ಮಿನಿಕೆ:**—ಅವಳು ಸವಿನುಡಿಗಳಿಂದ ಭರ್ತೃದಾರಿಕೆಯ ತಲೆನೋವನ್ನು ಕಡಿಮೆ ಮಾಡುವಳು.

**ಮಧುಕರಿಕೆ:**—ಸರಿ. ಭರ್ತೃದಾರಿಕೆಯು ಎಲ್ಲಿ ಮಲಗಿದ್ದಾಳೆ!

**ಪದ್ಮಿನಿಕೆ:**—ಸಮುದ್ರಗೃಹಕದಲ್ಲಿ ಆಕೆಯ ಹಾಸಿಗೆಯನ್ನು ಹಾಸಿದೆ. ಈಗ ನೀನು ಹೋಗು. ಇದನ್ನು ಯಜಮಾನನಿಗೆ ತಿಳಿಸುವುದಕ್ಕೋಸ್ಕರ ನಾನಾದರೂ ಪೂಜ್ಯನಾದ ವಸಂತಕನನು ಹುಡುಕುವೆನು.

**ಮಧುಕರಿಕೆ:**—ಹಾಗೆಯೇ ಆಗಲಿ.

[ ಹೊರಡುತ್ತಾಳೆ.

**ಪದ್ಮಿನಿಕೆ:**—ಪೂಜ್ಯನಾದ ವಸಂತಕನನ್ನು ಎಲ್ಲಿ ಹುಡುಕಲಿ!

( ಅನಂತರ ವಿದೂಷಕನು ಬರುತ್ತಾನೆ. )

**ವಿದೂಷಕ:**—ದೇವಿಯ ವಿಯೋಗದಿಂದ ವಿರಕ್ತವಾದ ಮನಸ್ಸುಳ್ಳ ಪೂಜ್ಯನಾದ ವತ್ಸರಾಜನಿಗೆ, ಪದ್ಮಾವತಿಯನ್ನು ಮದುವೆಯಾದುದರಿಂದ ಈಹೊತ್ತು ಈ ಸುಖಾವಹವಾದ ಮಂಗಲೋತ್ಸವದಲ್ಲಿ ಮದನಾಗ್ನಿಯ ದಾಹವು ಅಧಿಕವಾಗಿದೆ. (ಪದ್ಮಿನಿಕೆಯನ್ನು ನೋಡಿ) ಅಹಾ! ಪದ್ಮಿನಿಕೆಯು! ಪದ್ಮಿನಿಕೇ, ನಿನ್ನ ಕೈಯಲ್ಲಿರುವುದೇನು?

**ಪದ್ಮಿನಿಕೆ:**—ಪೂಜ್ಯನೇ, ವಸಂತಕಾ, ಭರ್ತೃದಾರಿಕೆಯಾದ ಪದ್ಮಾವತಿಯು ತಲೆನೋವಿನಿಂದ ನರಳುತ್ತಿರುವಳೆಂಬುದು ನಿನಗೆ ಗೊತ್ತಿಲ್ಲವೇ?

**ವಿದೂಷಕ:**—ಪೂಜ್ಯೆಯೇ, ದಿಟವಾಗಿಯೂ ನಾನರಿಯೆನು.

**ಪದ್ಮಿನಿಕೆ:**—ಹಾಗಾದರೆ, ಈ ಸಂಗತಿಯನ್ನು ಯಜಮಾನನಿಗೆ ತಿಳಿಸು. ನಾನಾದರೂ ತಲೆನೋವಿಗೆ ಔಷಧವನ್ನು ತೇಯುವದಕ್ಕಾಗಿ ಬೇಗನೆ ಹೋಗುತ್ತೇನೆ.

**ವಿಧೂಷಕ:**—ಪದ್ಮಾವತಿಯು ಎಲ್ಲಿ ಮಲಗಿದ್ದಾಳೆ?

**ಪದ್ಮಿನಿಕೆ:**—ಸಮುದ್ರಗೃಹಕದಲ್ಲಿ.

**ವಿದೂಷಕ:**—ಪೂಜ್ಯೆಯೇ, ನೀನು ಹೋಗು. ನಾನೂ ಒಡೆಯನಿಗೆ ಈ ಸಂಗತಿಯನ್ನು ತಿಳಿಸುವೆನು.

[ ಇಬ್ಬರೂ ಹೊರಡುತ್ತಾರೆ.

ಇದು ಪ್ರವೇಶಕವು.

( ಅನಂತರ ಅರಸನು ಬರುತ್ತಾನೆ. )

**ಅರಸು:**—

**ತಳೆದಪೆನಾನೆ ಕಾಲವಶದಿಂ ಪೊಸವೆಂಡತಿದಿಣ್ಣಮಂ**
**ಗಡಾ ! ।**
**ಇಳೆಗೆಯವಂತಿಗೋಜನನೆನಿಪಂಗೆಣೆಯೊಳ್ವಸರಾಂತ**
**ಪುತ್ರಿಯಂ ॥**

ಅಳಿದ ಶರೀರೆಯಂ ಬಿಡದೆ ಬೆಂಕಿಯೊಳಾ ಪುರದಲ್ಲಿ
ಪೂರ್ವದೊಳ್ ।
ಚಳಿಯತಿಪೀಡೆಯಿಂದಳಿದ ಪದ್ಮಿನಿಯಂತಿರೆ
ಭಾವಿಸಿರ್ದಪೆಂ ॥ ೧ ॥

( ಆ ಮೇಲೆ ವಿದೂಷಕನು ಬರುತ್ತಾನೆ. )

**ವಿದೂಷಕ:**—ಪೂಜ್ಯನೇ, ತ್ವರೆಮಾಡು; ತ್ವರೆಮಾಡು.

**ಅರಸು:**—ಅದೇಕೆ ?

**ವಿದೂಷಕ:**—ಪೂಜ್ಯೆಯಾದ ಪದ್ಮಾವತಿಯು ತಲೆನೋವಿನಿಂದ ನರಳುತ್ತಿದ್ದಾಳೆ.

**ಅರಸು:**—ಇದನ್ನು ನಿನಗೆ ಯಾರು ಹೇಳಿದರು ?

**ವಿದೂಷಕ:**—ಪದ್ಮಿನಿಕೆಯು.

**ಅರಸು:**—ಆಹಾ ! ಕಷ್ಟವು ! ಕಷ್ಟವು ! !

ಪಡೆದು ಗುಣರೂಪಯುತೆಯಂ ।
ಕಡಿಮೆಯದಾಯ್ತೆನಗಮುಸುಖಿಗಂ ದುಮ್ಮಾನಂ ॥
ಪಡೆದಂ ದುಗುಡಮನಾಗಳ್ ।
ಬಿಡದಾಂ ಪದ್ಮಾವತಿಯುಮನಂತೆಯೆ ತಿಳಿವೆಂ ॥ ೨ ॥

ಪದ್ಮಾವತಿಯು ಈಗ ಎಲ್ಲಿ ಇರುತ್ತಾಳೆ ?

**ವಿದೂಷಕ:**—ಸಮುದ್ರಗೃಹಕದಲ್ಲಿ ಮಲಗಿದ್ದಾಳೆ.

**ಅರಸು:**—ಹಾಗಾದರೆ, ಅದರ ಹಾದಿಯನ್ನು ತೋರಿಸು.

**ವಿದೂಷಕ:**—ಹೀಗೆ ಹೀಗೆ ದಯಮಾಡಿಸಬೇಕು.

[ ಇಬ್ಬರೂ ಹೊರಡುತ್ತಾರೆ.

**ವಿದೂಷಕ:**—ಇದು ಸಮುದ್ರಗೃಹಕವು ಒಳಗೆ ನಡೆ.

**ಅರಸು:**—ನೀನೇ ಮೊದಲು ನಡೆ.

**ವಿದೂಷಕ:**—ಪೂಜ್ಯನೇ, ಹಾಗೆಯೇ ಆಗಲಿ. ( ಒಳಗೆ ಹೋಗಿ ) ಅಯ್ಯೋ ! ನಿಲ್ಲು; ನಿಲ್ಲು. ಸ್ವಲ್ಪ ನಿಲ್ಲು.

**ಅರಸು**:—ಅದೇಕೆ?

**ವಿದೂಷಕ**:—ಇಗೋ, ನೆಲದ ಮೇಲೆ ಹರಿದಾಡುತ್ತಿರುವ ಒಂದು ಹಾವು ದೀಪದ ಬೆಳಕಿನಲ್ಲಿ ಕಾಣುತ್ತದೆ.

**ಅರಸು**:—(ಒಳಗೆ ಹೊಕ್ಕು ನೋಡಿ, ಮುಗುಳ್ನಗೆಯಿಂದ) ಅಹಹಾ! ಹಾವೆಂದು ತಿಳಿಯುವದು ದಡ್ಡತನವು.

**ಸರಳಾಯತಮುಖತೋರಣ- ।**
**ತರಳಸ್ರಜವುಂ ಸುಮಂದವಾತದೆ ಕೊಂಚಂ ॥**
**ಇರುಳೊಳ್ಹಿಂಯಂತಿರಲೆಯುವ ।**
ಧರಣಿಗೆ ಬಿಳ್ದುದನೆ ಜಡ್ಡ! ವಾವೆಂದರಿವಯ್ ॥ ೩ ॥

**ವಿದೂಷಕ**:—(ದಿಟ್ಟಿಸಿ ನೋಡಿ) ನೀನು ಹೇಳಿದುದು ದಿಟ. ಇದು ಹಾವಲ್ಲ. (ಮುಂದಕ್ಕೆ ಬಂದು ನೋಡಿ) ಪೂಜ್ಯೆಯಾದ ಪದ್ಮಾವತಿಯು ಇಲ್ಲಿಗೆ ಬಂದು ತಿರುಗಿ ಹೋಗಿರಬೇಕು.

**ಅರಸು**:— ಅವಳು ಇಲ್ಲಿಗೆ ಬಂದಿಲ್ಲವೆಂದೇ ತಿಳಿಯುತ್ತೇನೆ.

**ವಿದೂಷಕ**:—ಅದು ಹೇಗೆ?

**ಅರಸು**:—ಈ ವಿಷಯದಲ್ಲಿ ಹೇಳಬೇಕಾದುದೇನು?

**ಪಾಸುಗೆಯಲ್ಲ ಬಗ್ಗಿದುದು ಪಾಸಿದವೊಲ್**
**ಮೊದಲಿರ್ಪುದಂತು ಮೇ- ।**
**ಲ್ಪಾಸುಗೆಯಲ್ಲ ತಾಂ ಸುರುಳ್ದುದಿಂ ತಲೆಗಿಂಬವುಳಂ**
**ಶಿರಸ್ಸಿನಾ- ॥**
**ಔಷಧದಿಂದದೂಷಿತಮೆ; ಕಣ್ಣ ವಿಲೋಭನೆಗಿಲ್ಲ**
**ಶೋಭೆಯುಂ ।**
**ಸಾಸದೆ ಸಜ್ಜೆಯುಂ ಮಲಗಿದಂ ಬಿಡನಯ್ ತ್ವರೆಯಿಂದೆ**
**ರೋಗಿತಾಂ ॥ ೪ ॥**

**ವಿದೂಷಕ**:—ಹಾಗಾದರೆ, ಈ ಹಾಸಿಗೆಯ ಮೇಲೆ ಒಂದು

ಕ್ಷಣಹೊತ್ತು ಕುಳಿತು ಪದ್ಮಾವತಿಯನ್ನು ಪ್ರತೀಕ್ಷಿಸುವದು ಒಳ್ಳೆಯದು.

**ಅರಸು:**—ಅಹುದು. ( ಕುಳಿತು ) ಗೆಳೆಯನೇ, ನನಗೆ ನಿದ್ದೆ ಬರುತ್ತಿದೆ. ಒಂದು ಕಥೆಯನ್ನು ಹೇಳು.

**ವಿದೂಷಕ:**— ಹೇಳುವೆನು. ನೀನು ' ಹು ' ಅನ್ನಬೇಕು.

**ಅರಸು:**—ಓಹೋ, ಅನ್ನುವೆನು.

**ವಿದೂಷಕ:**—ಉಜ್ಜಯಿನಿ ಎಂಬುದೊಂದು ಪಟ್ಟಣವಿದೆ. ಅಲ್ಲಿಯ ನೀರು ಜಳಕ ಮಾಡುವುದಕ್ಕೆ ಒಳ್ಳೇ ಹಿತಕರವಾದುದು.

**ಅರಸು:**—ಇದೇನು? ಉಜ್ಜಯಿನೀ ಪಟ್ಟಣವನ್ನೇ ಹೇಳ ತೊಡಗಿದೆ.

**ವಿದೂಷಕ:**—ಈ ಕಥೆಯು ಬೇಡವಾದರೆ, ಇನ್ನೊಂದನ್ನು ಹೇಳುವೆನು.

**ಅರಸು:**—ಗೆಳೆಯನೇ, ಇದು ನನಗೆ ಬೇಡಾಗಿಲ್ಲ; ಆದರೆ,

ಪೊರಮಡುವಾಗಳ್ ಸ್ವೀಯಾ ।
ಸ್ಮರಣಾಸಕ್ತೆಯನತೀವರಾಗದೆ ಕಣ್ಣೊಳ್ ॥
ತುರುಗಿದ ನೀರ್ವನಿಗಳನೆ- ।
ನ್ನುರದೆ ಸುರಿಸುವಳನವಂತಿಪಜೆಯಂ ನೆನೆವೆಂ ॥ ೫ ॥

ಮತ್ತು.

ಪಲವುಪದೇಶಂಗಳೊಳಂ ।
ನಲಪಿಂದೆನ್ನಂ ನಿರೀಕ್ಷಿಸುತ್ತಂ ಕೋಣಂ ॥
ಕಳಚಿದ ಕೈಯಿಂದೀಗಳ್ ।
ಲಲನೆಯನಾ ಶೂನ್ಯವಾದನಂ ಮಾಡಿದಳಂ ॥ ೬ ॥

**ವಿದೂಷಕ:**—ಆಗಲಿ; ಎರಡನೆಯದನ್ನು ಹೇಳುವೆನು. ಬ್ರಹ್ಮದತ್ತವೆಂಬುದೊಂದು ಪಟ್ಟಣವಿದೆ; ಅಲ್ಲಿ ಕಾಂಪಿಲ್ಯನೆಂಬ ಅರಸನು ರಾಜ್ಯವಾಳುತ್ತಿದ್ದನು.

**ಅರಸು:**—ಆ, ಏನು?

**ವಿದೂಷಕ:**–(ಮತ್ತೆ ಮೊದಲಿನದನ್ನು ಹೇಳುತ್ತಾನೆ.)

**ಅರಸು:**—ಮೂರ್ಖನೇ, ರಾಜನು ಬ್ರಹ್ಮದತ್ತನೆಂದೂ, ನಗರವು ಕಾಂಪಿಲ್ಯವೆಂದೂ ಹೇಳು.

**ವಿದೂಷಕ:**—ಏನು? ಅರಸನ ಹೆಸರು ಬ್ರಹ್ಮದತ್ತ? ಪಟ್ಟಣವು ಕಾಂಪಿಲ್ಯವೊ?

**ಅರಸು:**—ಅಹುದು.

**ವಿದೂಷಕ:**—ಹಾಗಾದರೆ ಸ್ವಲ್ಪ ಹೊತ್ತು ತಡೆ. ಇಷ್ಟರಲ್ಲಿ ಬಾಯಪಾಠಮಾಡಿ ಹೇಳುವೆನು. ('ಬ್ರಹ್ಮದತ್ತನೆಂಬ ಅರಸು; ಕಾಂಪಿಲ್ಯವೆಂಬ ಪಟ್ಟಣವು; ಎಂದು ಹಲವು ಸಾರೆ ಅನ್ನುತ್ತಾನೆ.) ಇನ್ನು ಮೇಲೆ ಕೇಳು. ಇದೇನು? ಪೂಜ್ಯನು ನಿದ್ದೆಹೋದನಲ್ಲ! ಈಗ ಚಳಿಯು ಬಹಳವಾಗಿದೆ. ನನ್ನ ದುಪ್ಪಟಿಯನ್ನು ತೆಗೆದುಕೊಂಡು ಬರುವೆನು.

[ಹೋಗುತ್ತಾನೆ.

(ಆ ಮೇಲೆ ಅವಂತಿಕೆಯ ವೇಷವನ್ನು ಧರಿಸಿದ ವಾಸವದತ್ತೆಯೂ ಚೇಟಿಯೂ ಬರುತ್ತಾರೆ.)

**ಚೇಟಿ:**—ಪೂಜಿಯ್ಯೇ, ನಡೆ; ನಡೆ. ಭರ್ತೃದಾರಿಕೆಗೆ ತಲೆನೋವಿನ ಬಾಧೆಯು ಬಹಳವಾಗಿದೆ.

**ವಾಸವದತ್ತೆ:**—ಅಯ್ಯೊ ಕಷ್ಟವು! ಪದ್ಮಾವತಿಯು ಎಲ್ಲಿ ಮಲಗಿದ್ದಾಳೆ?

**ಚೇಟಿ:**—ಸಮುದ್ರ ಗ್ರಹಕದಲ್ಲಿ.

**ವಾಸವದತ್ತೆ:**—ಹಾಗಾದರೆ, ಮುಂದೆ ಮುಂದೆ ನಡೆ.

[ಇಬ್ಬರೂ ಮುಂದಕ್ಕೆ ಹೋಗುತ್ತಾರೆ.]

**ಚೇಟಿ:**—ಇದೇ ಸಮುದ್ರಗ್ರಹಕವು. ಪೂಜ್ಯೆಯೇ, ಒಳಗೆ ಹೋಗು. ನಾನು ಬೇಗನೇ ತಲೆನೋವಿನ ಔಷಧವನ್ನು ತೇಯುತ್ತೇನೆ.

**ವಾಸವದತ್ತೆ**:—ಅಹಹಾ! ದೇವರಿಗೆ ಸ್ವಲ್ಪವಾದರೂ ದಯೆ ಯಿಲ್ಲ. ವಿರಹವ್ಯಥೆಯಿಂದ ಪೀಡಿತನಾದ ಆರ್ಯಪುತ್ರನ ವಿಶ್ರಾಮಸ್ಥಾನವಾದ ಪದ್ಮಾವತಿಯು ಕೂಡ ಹಾಸಿಗೆಯನ್ನು ಹಿಡಿದ ಳಲ್ಲ! ಇರಲಿ ಒಳಗೆ ಹೋಗುವೆನು. (ಒಳಹೊಕ್ಕು ನೋಡಿ) ಅಹಾ! ಸೇವಕರ ಪ್ರಮಾದವು! ಅಸ್ವಸ್ಥೆಯಾದ ಪದ್ಮಾವತಿಯ ಹತ್ತರ ದೀವಿಗೆಯೊಂದನ್ನು ಮಾತ್ರ ಇಟ್ಟು, ಹೊರಟು ಹೋಗಿರುವರಲ್ಲ! ಇಗೋ ಪದ್ಮಾವತಿಯು ಮಲಗಿದ್ದಾಳೆ. ಆದುದರಿಂದ ನಾನು ಇಲ್ಲಿ ಕುಳಿತುಕೊಳ್ಳುತ್ತೇನೆ; ಬೇರೆ ಆಸನದಲ್ಲಿ ಕುಳಿತುಕೊಳ್ಳುವುದರಿಂದ ಸ್ನೇಹವು ಕಡಿಮೆಯೆಂದು ತೋರಬಹುದು. ಆದುದರಿಂದ ಇವಳ ಹಾಸಿಗೆಯ ಮೇಲೆಯೇ ಕುಳಿತುಕೊಳ್ಳುತ್ತೇನೆ. (ಕುಳಿತು) ಇವಳೊಡನೆ ಹಾಸುಗೆಯ ಮೇಲೆ ಕುಳಿತುಕೊಳ್ಳುವುದರಿಂದ ಈಹೊತ್ತು ನನ್ನ ಮನಸ್ಸಿಗೆ ಏಕೋ ಬಹಳೇ ಆನಂದವಾಗುತ್ತದೆ. ಸುದೈವದಿಂದ ಅನಾಯಾಸವಾಗಿ ಒಂದೇ ಸವನೇ ಉಸಿರಾಡಿಸುತ್ತಿರುವಳು. ಆದುದರಿಂದ ಈಗ ಇವಳ ಬೇನೆಯು ಕಡಿಮೆಯಾಗಿರಲಿಕ್ಕೆ ಬೇಕು. ಹಾಸುಗೆಯ ಒಂದು ಭಾಗವನ್ನು ಬಿಟ್ಟು ಮಲಗಿರುವುದರಿಂದ, ತನ್ನನ್ನು ನಾನು ಅಪ್ಪಿಕೊಳ್ಳಬೇಕೆಂದು ಸೂಚಿತವಾಗುತ್ತದೆ. ಆದುದರಿಂದ ಮಲಗುವೆನು.

**ಅರಸು**:—(ಕನಸಿನಲ್ಲಿ) ಹಾ! ವಾಸವದತ್ತೇ!

**ವಾಸವದತ್ತೆ**:—(ತಟ್ಟನೆ ಎದ್ದು) ಅಹಾ! ಆರ್ಯಪುತ್ರನು! ಪದ್ಮಾವತಿಯಲ್ಲ!! ಆರ್ಯಪುತ್ರನು ನನ್ನನ್ನು ನೋಡಿದನೇ? ಪೂಜ್ಯನಾದ ಯೌಗಂಧರಾಯಣನ ಮಹತ್ವದ ಪ್ರತಿಜ್ಞೆಯು ನನ್ನ ನಿಜಸ್ವರೂಪ ದರ್ಶನದಿಂದ ವ್ಯರ್ಥವಾಗುವದು.

**ಅರಸು**:—ಹಾ! ಅವಂತಿರಾಜಪುತ್ರೀ!

**ವಾಸವದತ್ತೆ**:—ಸುದೈವದಿಂದ ಆರ್ಯಪುತ್ರನು ಸ್ವಪ್ನಾವಸ್ಥೆಯಲ್ಲಿದ್ದಾನೆ. ಇಲ್ಲಿ ಯಾರೂ ಇಲ್ಲ. ಆದುದರಿಂದ ಒಂದು ಕ್ಷಣ

ಕಾಲ ಇಲ್ಲಿ ನಿಂತು, ಮನಸ್ಸನ್ನೂ ದೃಷ್ಟಿಯನ್ನೂ ತೃಪ್ತಿಬಡಿಸಿ ಕೊಳ್ಳುವೆನು.

**ಅರಸು**:—ಹಾ! ಪ್ರಿಯೇ! ಹಾ! ಪ್ರಿಯಶಿಷ್ಯೇ! ನನಗೆ ವಚನಕೊಡು.

**ವಾಸವದತ್ತೆ**:—ಪ್ರಿಯನೇ, ಮಾತಾಡುತ್ತೇನೆ; ಮಾತಾಡು ತ್ತೇನೆ.

**ಅರಸು**:—ಸಿಟ್ಟಾಗಿರುವೆಯಾ?

**ವಾಸವದತ್ತೆ**:—ಇಲ್ಲ; ಇಲ್ಲ. ದುಃಖಿತೆಯಾಗಿರುವೆನು.

**ಅರಸು**:— ಕೋಪಿಸಿಕೊಂಡಿರದಿದ್ದರೆ ಆಭರಣಗಳನ್ನೇಕೆ ಇಟ್ಟುಕೊಂಡಿಲ್ಲ?

**ವಾಸವದತ್ತೆ**:—ಇದಕ್ಕೂ ಹೆಚ್ಚಿನ ಕಾರಣಗಳೇನು ಬೇಕು?

**ಅರಸು**:—ವಿರಚಿಕೆಯನ್ನು ಸ್ಮರಿಸುವೆಯಾ?

**ವಾಸವದತ್ತೆ**:—ಹಾ! ಸಾಕು; ಸಾಕು. ಇಲ್ಲಿಯೂ ವಿರ ಚಿಕೆಯೇ?

**ಅರಸು**:—ಹಾಗಾದರೆ, ವಿರಚಿಕೆಯ ಹೆಸರು ತೆಗೆದುಕೊಂಡ್ಡು ದಕ್ಕಾಗಿ ನಿನ್ನನ್ನು ಬೇಡಿಕೊಳ್ಳುತ್ತೇನೆ. (ಕೈಗಳನ್ನು ಚಾಚು ತ್ತಾನೆ.)

**ವಾಸವದತ್ತೆ**:—ಬಹಳಹೊತ್ತು ನಿಂತುಕೊಂಡೆನು. ಯಾರಾ ದರೂ ನನ್ನನ್ನು ನೋಡಿಯಾರು? ಆದುದರಿಂದ ಇನ್ನು ಹೋಗು ವೆನು. ಮಂಚದ ಕೆಳಗೆ ನೇತಾಡುವ ಆರ್ಯಪುತ್ರನ ಕೈಗಳನ್ನು ಹಾಸಿಗೆಯಲ್ಲಿರಿಸಿ ಹೋಗುವೆನು.

[ಹಾಗೆ ಮಾಡಿ ಹೊರಟು ಹೋಗುತ್ತಾಳೆ.]

**ಅರಸು**:—(ತಟ್ಟನೆ ಎದ್ದು) ವಾಸವದತ್ತೇ, ನಿಲ್ಲು; ನಿಲ್ಲು. ಅಯ್ಯೋ ಕಷ್ಟವು!

ಇರದತಿಸಂಭ್ರಮದಿಂದಂ।
ಪೊರಮಟ್ಟಂ ದ್ವಾರಪಕ್ಷದಿಂ ತಾಡಿತನಾಂ ॥

ಅರಿಯೆಂ ಮನ್ಮಾನಸದೊಳ್- ।
ಗಿರುವುದು ದಿಟವೋ? ಇದಂಗಡಾ! ಸುಸ್ಪಷ್ಟಂ ॥ ೭ ॥

( ಅನಂತರ ವಿದೂಷಕನು ಬರುತ್ತಾನೆ. )

**ವಿದೂಷಕ:**—ಆಹಾ! ಆರ್ಯಪುತ್ರನು ಎಚ್ಚತ್ತಿದ್ದಾನೆ!

**ಅರಸು:**—ಗೆಳೆಯನೇ, ಸಂತೋಷದ ಸಂಗತಿಯನ್ನು ಹೇಳುತ್ತೇನೆ! ವಾಸವದತ್ತೆಯು ಬದುಕಿದ್ದಾಳೆ.

**ವಿದೂಷಕಃ**—ಅಯ್ಯೋ! ವಾಸವದತ್ತೆಯೇ? ಇನ್ನೆಲ್ಲಿಯ ವಾಸವದತ್ತೆ? ಆಕೆಯು ಸತ್ತು ಎಷ್ಟೋ ದಿನಗಳಾದವು.

**ಅರಸುಃ**--ಗೆಳೆಯನೇ, ಅಲ್ಲ; ಹಾಗಲ್ಲ.

ಮಲಗಿದನನೆಬ್ಬರಿಸಿಯಾ- ।
ಲಲನೆಗಡಾ! ಪೋದಳಾಗಳಿಂತಿದು ಸತ್ಯಂ ॥
ಅಳಿದಳ್ ಬೆಂಕಿಯೊಳೆನುತಂ ।
ಗೆಳೆಯಾ ಮೊದಲೊರೆದನಿಂದೆ ವಂಚಿತನಿರ್ದೆಂ ॥ ೮ ॥

**ವಿದೂಷಕಃ**--ಅಹಹಾ? ಅದು ಅಸಂಭವನೀಯವಲ್ಲ! ಓಹೋ. ಉಜ್ಜಯಿನೀ ಪಟ್ಟಣದ ಸ್ನಾನಯೋಗ್ಯವಾದ ನೀರಿನ ಬಣ್ಣನೆಯನ್ನು ಕೇಳಿ, ವಾಸವದತ್ತೆಯನ್ನೇ ನೆನೆಸುತ್ತಿದ್ದ ನೀನು ಅವಳನ್ನು ಕನಸಿನಲ್ಲಿ ಕಂಡಿರಬಹುದು.

**ಅರಸು**—ಹಾಗಾದರೆ, ನನಗೆ ಕನಸು ಬಿದ್ದಿತ್ತೆಂದು ತಿಳಿಯುವೆಯಾ?

ಇದು ಕನಸಾದೊಡೆ ಸತತಮು- ।
ಮಿದೆಯಿರ್ಕದು ಬೇಡವೆಚ್ಚರಿಕೆಯೆಂದೆಂದುಂ ॥
ಇದು ವಿಭ್ರಮಮಾದೊಡೆತಾ- ।
ನಿದೆ ವಿಭ್ರಮಮಿರ್ಕೆಯೆನಗೆ ಚಿರಕಾಲದೊಳಂ ॥ ೯ ॥

**ವಿದೂಷಕಃ**—ಎಲೈ ಗೆಳೆಯನೇ, ಈ ಪಟ್ಟಣದಲ್ಲಿ 'ಅವಂತಿ

ಸುಂದರಿ’ ಎಂಬ ಯಕ್ಷಣಿಯು ಇದ್ದಾಳೆ. ಅವಳನ್ನು ನೀನು ನೋಡಿರಬಹುದು.

**ಅರಸು:**—ಇಲ್ಲ; ಇಲ್ಲ.

ಕನಸಿನ ಕಡೆಯೊಳ್ ಜಾಗರ- ।
ವನಾಂತನಾಂ ನೋಡಿದೆಂ ನಡತೆ ವಿೂರದಳಾ ॥
ಮನವೆಳೆವ ಕಣ್ಗಳೊಳಗಂ- ।
ಜನವಿಲ್ಲದ ದೀರ್ಘಕುಂತಲಾನ್ವಿತಮುಖಮಂ ॥ ೧೦ ॥

ಮತ್ತು ಗೆಳೆಯನೇ, ಕೇಳು; ಕೇಳು.

ಬೆದರಿದಳವಳಿಂ ಪೀಡಿತ- ।
ವಿುದುತೋಳ್ ಕನಸಿನೊಳಗಾದೊಡಂ ತಾನಾಗಳ್ ॥
ಮುದದಿಂ ತತ್ಸ್ಪರ್ಶಮನಾಂ- ।
ತುದರಿಂ ರೋಮಾಂಚಮಂ ಗಡಾ! ಬಿಡದಿನ್ನುಂ ॥೧೧॥

**ವಿದೂಷಕ:**—ಇನ್ನು ನೀನು ಕೆಟ್ಟುದನ್ನು ಆಲೋಚಿಸಬೇಡ. ನಡೆ; ಚತುಃ ಶಾಲೆಗೆ ಹೋಗೋಣ.

(ಅಷ್ಟರಲ್ಲಿ ಕಾಂಚುಕೀಯನು ಬರುತ್ತಾನೆ.)

**ಕಾಂಚುಕೀಯ:**—ಆರ್ಯಪುತ್ರನಿಗೆ ಗೆಲವಾಗಲಿ ತಮ್ಮ ಅಮಾತ್ಯನಾದ ರುಮಣ್ವಂತನು ದೊಡ್ಡದಂಡನ್ನು ಕೂಡಿಕೊಂಡು, ಹಗೆಯಾದ ಆರುಣಿಯನ್ನು ಕೊಲ್ಲಲು ಬಂದಿದ್ದಾನೆಂದೂ, ನಮ್ಮ ಆನೆಕುದುರೆ ತೇರು ಕಾಲಾಳುಗಳು ಸಜ್ಜಾಗಿರುವವೆಂದೂ, ನಮ್ಮ ದರ್ಶಕ ಮಹಾರಾಜರು ಹೇಳಿದ್ದಾರೆ. ಆದುದರಿಂದ ತಾವು ಹೊರಡಬೇಕು.

ಭೂನಾಥಾ, ಒಡೆದತ್ತು ವೈರಿನಿವಹಂ, ಪೌರರ್ಸಮಾಶ್ವಾಸಿತರ್ ।
ಸೇನಾಪೃಷ್ಠದ ರಕ್ಷಣಕ್ಕೆ ಬಹುಲೋಪಾಯಂ ಕೃತಂಸಮ್ಮತಂ ॥

ಆನೀಗಳ್ ರಿಪುನಾಶಕಂ ಸಕಲಮಂ ಕೇಳ್ ಗೆಯ್ದನಯ್
ರಾಜ, ಗಂ- ।
ಗಾನದ್ಯಂತದೆ ಪೋದುವೆಲ್ಲ ದಳಗಳ್ ಹಸ್ತಂಗತರ್
ವತ್ಸರುಂ ॥ ೧೨ ॥

**ಅರಸುः**—( ಎದ್ದು ) ಸರಿ; ಸರಿ. ನಾನಾದರೋ ಈಗ,

ದಾರುಣಕರ್ವುಣದೆ ದಕ್ಷನ- ।
ನಾರುಣಿಯಂ ನಾಗತುರಗತೀರ್ಣದೆ ಕೊಲ್ವೆಂ ।
ವಾರಿಧ್ಯಾಭದೆ, ಕೀರ್ಣೋರ್- ।
ಗ್ರೋರುಶರತರಂಗಭಂಗದೊಳ್ ಕೊಳಗುಳದೊಳ್

[ ಎಲ್ಲರೂ ಹೊರಡುತ್ತಾರೆ.

ಐದನೆಯ ಅಂಕವು ಮುಗಿಯಿತು.

---

## ಆರನೆಯ ಅಂಕವು.

( ಆ ಮೇಲೆ ಕಾಂಚುಕೀಯನು ಬರುತ್ತಾನೆ. )

**ಕಾಂಚುಕೀಯ**:—ಅರಮನೆಯ ಕಾಂಚನತೋರಣದ್ವಾರದಲ್ಲಿರುವವರು ಯಾರು?

( ಪ್ರತೀಹಾರಿಯು ಬರುತ್ತಾಳೆ. )

**ಪ್ರತೀಹಾರಿ**:—ಪೂಜ್ಯನೇ, ನಾನು; ವಿಜಯೆ; ಏನಪ್ಪಣೆ?

**ಕಾಂಚುಕೀಯ**:—ಮಹಾಸೇನನಿಂದ ಕಳುಹಲ್ಪಟ್ಟ ರೈಭ್ಯಸನೆಂಬ ಕಾಂಚುಕೀಯನೂ, ಪೂಜ್ಯೆಯಾದ ಅಂಗಾರವತಿಯಿಂದ ಕಳುಹಲ್ಪಟ್ಟ ವಸುಂಧರೆ ಎಂಬ ಹೆಸರಿನ ವಾಸವದತ್ತೆಯ ಉಪಮಾತೆಯೂ ಬಂದಿರುವರೆಂದು, ವತ್ಸರಾಜ್ಯ ಲಾಭದಿಂದ ಉದಯ ಹೊಂದುತ್ತಿರುವ ಉದಯನರಾಜನಿಗೆ ತಿಳಿಸು.

**ಪ್ರತೀಹಾರಿ:**—ಪೂಜ್ಯನೇ, ಪ್ರತೀಹಾರಿಗೆ ಇದು ಯೋಗ್ಯ ಕಾಲವಲ್ಲ.

**ಕಾಂಚುಕೀಯ:**—ಅದೇಕೆ?

**ಪ್ರತೀಹಾರಿ:**—ಪೂಜ್ಯನೇ, ಕೇಳು. ಇಂದು ಮಹಾರಾಜನು ಸೂರ್ಯಮುಖ ಪ್ರಾಸಾದದಲ್ಲಿದ್ದ ಯಾವನೋ ಒಬ್ಬನು ವೀಣೆಯನ್ನು ಬಾರಿಸುವದನ್ನು ಕೇಳಿದನು. ಅದನ್ನು ಕೇಳಿ "ಇದೇನು? ವೀಣೆಯ ಧ್ವನಿಯು ಕೇಳಬರುತ್ತದಲ್ಲ?" ಎಂದು ಪ್ರಶ್ನಮಾಡಿದನು.

**ಕಾಂಚುಕೀಯ:**—ಆ ಮೇಲೆ?

**ಪ್ರತೀಹಾರಿ:**—ಆ ಮೇಲೆ ಅಲ್ಲಿಗೆ ಹೋಗಿ "ಈ ವೀಣೆಯು ಎಲ್ಲಿ ಸಿಕ್ಕಿತೆಂ" ದು ಬಾರಿಸುವವನನ್ನು ಕೇಳಿದನು. ಆಗಲವನು "ನರ್ಮದಾ ನದಿಯ ದಂಡೆಯಲ್ಲಿ ದರ್ಭೆಗಳ ಗುಂಪಿನಲ್ಲಿ ಇದು ನನಗೆ ದೊರೆಯಿತು. ಒಂದು ವೇಳೆ ಇದು ತಮಗೆ ಬೇಕಾಗಿದ್ದರೆ ತೆಗೆದುಕೊಳ್ಳಬಹುದು." ಎಂದು ಹೇಳಿದನು. ಆ ಮೇಲೆ ಅದನ್ನು ತರಿಸಿ, ತೊಡೆಯ ಮೇಲೆ ಇಟ್ಟುಕೊಂಡು ಮೂರ್ಛೆಯನ್ನು ಹೊಂದಿದನು. ಮೂರ್ಛೆ ತಿಳಿದೆದ್ದ ಮೇಲೆ, ಕಣ್ಣೀರುಗಳಿಂದ ತುಂಬಿದ ಮುಖವುಳ್ಳವನಾಗಿ "ಎಲೈ ವೀಣೆಯೇ, ನಿನ್ನನ್ನು ಕಂಡೆನು. ಆದರೆ, ಆಕೆಯನ್ನು ಕಾಣಲಿಲ್ಲ!" ಎಂದು ಚಡಪಡಿಸಿದನು. ಪೂಜ್ಯನೇ, ಅರಸನ ಹತ್ತರ ಹೋಗುವುದಕ್ಕೆ ಹೀಗೆ ಇದು ತಕ್ಕ ಸಮಯವಾಗಿಲ್ಲ. ಆದುದರಿಂದ ನಿಮ್ಮ ಸಮಾಚಾರವನ್ನು ಹೇಗೆ ತಿಳಿಸಲಿ?

**ಕಾಂಚುಕೀಯ:**—ಪೂಜ್ಯನೇ, ತಿಳಿಸು; ತಿಳಿಸು. ನಮ್ಮ ಆಗಮನವಾದರೂ ಆಕೆಯ ಸಂಬಂಧವುಳ್ಳದ್ದೇ ಆಗಿದೆ.

**ಪ್ರತೀಹಾರಿ:**—ಪೂಜ್ಯನೇ, ಆಗಲಿ; ಹಾಗಾದರೆ ತಿಳಿಸುತ್ತೇನೆ. ಇಗೋ, ಮಹಾರಾಜನಾದರೂ ಸೂರ್ಯಮುಖಪ್ರಾ

ಸಾದದಿಂದ ಕೆಳಗೆ ಇಳಿಯುತ್ತಲಿದ್ದಾನೆ. ಆದುದರಿಂದ ಇಲ್ಲಿಯೇ ನಿವೇದಿಸುತ್ತೇನೆ.

**ಕಾಂಚುಕೀಯ:**—ಪೂಜ್ಯೆನೇ, ಹಾಗೆಯೇ ಮಾಡು.

[ ಇಬ್ಬರೂ ಹೋಗುತ್ತಾರೆ.

## ಇದು ಮಿಶ್ರವಿಷ್ಕಂಭಕವು.

( ಆ ಮೇಲೆ ಅರಸನೂ ವಿದೂಷಕನೂ ಬರುತ್ತಾರೆ. )

**ಅರಸು:**—

**ಎಂತು ಭಯದವನವಾಸವು ।**
**ನಾಂತಪೆ ದೇವೀ ಜಘನಕುಚಯುಗಲಸುಪ್ತೆ ॥**
**ಸಂತಸವೀವ ದನಿಯನೇ ।**
**ಸಂತಂ ದ್ವಿಜರಜದೆ ಕೀರ್ಣದಂಡೆಯೆಯೀಗಳ್ ॥ ೧ ॥**

ಮತ್ತು ಎಲೈ ವೀಣೆಯೇ, ಸ್ನೇಹರಹಿತೆಯಾಗಿರುತ್ತೀ; ಯಾಕೆಂದರೆ, ದೀನೆಯಾದ ದೇವಿಯು

**ಖೇದಕುಚಾಂತರಸೌಖ್ಯವು ।**
**ನಾದರದುಪಗೂಢಪಾರ್ಶ್ವಪೀಡನಮುಂ ಶ್ರೋ- ॥**
**ಣೀಧಾರಣಮುಂ ವಾದನ ।**
**ಖೇದಸ್ಮಿತಕಥನಮುಂ ವಿರಹವಿಲಪಿತಮುಂ ॥ ೨ ॥**

ಮೊದಲಾದ ಎಲ್ಲವನ್ನೂ ನೀನು ಮರೆತಿರುತ್ತೀ.

**ವಿದೂಷಕ:**—ಸಾಕು ಸಾಕು. ಇನ್ನು ಹೆಚ್ಚಾಗಿ ದು:ಖಿಸಬೇಡ.

**ಅರಸು:**—ಹಾಗಲ್ಲ, ಹಾಗಲ್ಲ.

**ಚಿರಸುಪ್ತಂ ಕಾಮಂ ಜಾ ।**
**ಗರವಾಂತುದದೀಗಳೆನಗೆ ವೀಣೆಯಿನಿದರಿಂ ॥**
**ಇರದಾವಳ್ಗಿದು ತಾಂ ಪ್ರಿಯ ।**
**ಕರವೋ ? ಆ ದೇವಿಯುಂ ಗಡಾದೊಡೆ ಕಾಣೆಂ ॥ ೩ ॥**

ವಸಂತಕನೇ, ಶಿಲ್ಪಿಗನಿಂದ ಹೊಸದಾದ ಒಂದು ವೀಣೆಯನ್ನು ಮಾಡಿಸಿ, ಬೇಗನೇ ತೆಗೆದುಕೊಂಡು ಬಾ.

**ವಿದೂಷಕ:**—ಅಪ್ಪಣೆ.

[ ಹೋಗುತ್ತಾನೆ.

( ಅಷ್ಟರಲ್ಲಿ ವೀಣೆಯನ್ನು ತೆಗೆದುಕೊಂಡು ಪ್ರತೀಹಾರಿಯು ಬರುತ್ತಾಳೆ. )

**ಪ್ರತೀಹಾರಿ:**—ಮಹಾರಾಜನಿಗೆ ವಿಜಯವಾಗಲಿ. ಮಹಾಸೇನನಿಂದ ಕಳುಹಲ್ಪಟ್ಟ ರೈಭ್ಯಸನೆಂಬ ಕಾಂಚುಕೀಯನೂ, ಅಂಗಾರವತೀದೇವಿಯಿಂದ ಕಳುಹಲ್ಪಟ್ಟ ವಸುಂಧರೆಯೆಂಬ ವಾಸವದತ್ತೆಯ ಉಪಮಾತೆಯೂ ಬಾಗಿಲಲ್ಲಿ ಬಂದಿದ್ದಾರೆ.

**ಅರಸು:**—ಹಾಗಾದರೆ, ಪದ್ಮಾವತಿಯನ್ನು ಕರೆ.

**ಪ್ರತೀಹಾರಿ:**—ಅಪ್ಪಣೆ.

[ ಹೋಗುತ್ತಾನೆ.

**ಅರಸು:**—ಈ ಸುದ್ದಿಯು ಇಷ್ಟು ಬೇಗನೇ ಮಹಾಸೇನನಿಗೆ ಗೊತ್ತಾಯಿತೇ?

( ಪದ್ಮಾವತಿಯೂ ಪ್ರತೀಹಾರಿಯೂ ಬರುತ್ತಾರೆ. )

**ಪ್ರತಿಹಾರಿ:**—ಭರ್ತೃದಾರಿಕೇ, ಹೀಗೆ ಬರಬೇಕು; ಹೀಗೆ ಬರಬೇಕು.

**ಪದ್ಮಾವತಿ:**—ಆರ್ಯಪುತ್ರರಿಗೆ ವಿಜಯವಾಗಲಿ.

**ಅರಸು:**—ಪದ್ಮಾವತೀ, ಮಹಾಸೇನನಿಂದ ಕಳುಹಲ್ಪಟ್ಟ ರೈಭ್ಯಸನೆಂಬ ಕಾಂಚುಕೀಯನೂ, ಅಂಗಾರವತಿಯಿಂದ ಕಳುಹಲ್ಪಟ್ಟ ವಸುಂಧರೆಯೆಂಬ ವಾಸವದತ್ತೆಯ ಉಪಮಾತೆಯೂ ಬಾಗಿಲಲ್ಲಿ ಬಂದಿದ್ದಾರೆಂಬುದನ್ನು ಕೇಳಿದೆಯಾ?

**ಪದ್ಮಾವತಿ:**—ಆರ್ಯಪುತ್ರರೇ, ನಂಟರ ಕ್ಷೇಮಸಮಾಚಾರವನ್ನು ತಿಳಿದುಕೊಳ್ಳುವುದು ನನಗೆ ಇಷ್ಟವೇ ಆಗಿದೆ.

**ಅರಸು:**—ವಾಸವದತ್ತೆಯ ಆಪ್ತರು ನಿನಗೆ ನಂಟರೆಂದು

ಯೋಗ್ಯವಾಗಿಯೇ ಹೇಳಿದೆ. ಪದ್ಮಾವತೀ, ಕುಳಿತುಕೋ; ಇನ್ನು ಮೇಲೆ ಕುಳಿತುಕೊಳ್ಳುವುದಕ್ಕೆ ಸಂದೇಹಬಡುತ್ತಿಯೇಕೆ?

**ಪದ್ಮಾವತಿಃ**—ನನ್ನ ಸಂಗಡ ಕುಳಿತುಕೊಂಡೇ ಆ ಬಂದಂತಹ ಗೃಹಸ್ಥರನ್ನು ನೋಡುತ್ತೀರೇನು?

**ಅರಸು:**--ತಪ್ಪೇನು?

**ಪದ್ಮಾವತಿ**—ಆರ್ಯಪುತ್ರರ ಎರಡನೆಯ ಹೆಂಡತಿಯೆಂದು ಆತನು ಉದಾಸೀನನಾಗಬಹುದು.

**ಅರಸು:**—ಹೆಂಡತಿಯನ್ನು ನೋಡಬಹುದಾದ ಮನುಷ್ಯನ ಕಣ್ಣಿಗೆ ಅವಳನ್ನು ಬೀಳಗೊಡದಿರುವುದು ದೊಡ್ಡ ತಪ್ಪು. ಅದುದರಿಂದ ಇಲ್ಲಿಯೇ ಕುಳಿತುಕೋ.

**ಪದ್ಮಾವತಿಃ**—ಆರ್ಯಪುತ್ರರ ಅಪ್ಪಣೆಯಂತಾಗಲಿ (ಕುಳಿತುಕೊಂಡು) ಆರ್ಯಪುತ್ರರೇ, ಅಪ್ಪನಾಗಲಿ, ಅವ್ವನಾಗಲಿ ಏನನ್ನುವರೆಂದು ಶಂಕೆಯುಳ್ಳವಳಾಗಿದ್ದೇನೆ.

**ಅರಸುಃ**--ಪದ್ಮಾವತೀ, ಇದು ಹೀಗೆ.

ಏನೆಂಬರೆಂದು ಚಿತ್ತಂ ।
ತಾನಿದು ಪರಿಶಂಕಿತಂ ಗಡಿರ್ಪದು ಮೊದಲೊಳ್ ॥
ಆನಪಹರಿಸಿದೊಡಂ ಜೋ- ।
ಪಾನಮನಾಂ ಗೆಯ್ದೆನಿಲ್ಲವಾಕನ್ನಿಕೆಯಾ ॥ ೪ ॥
ಜನಕಂಗೆ ತನ್ನ ಕೃತಿಯಿಂ ।
ಜನಿಯಿಸಿದಂ ಮಗನತೆರದೆ ರೋಷಮನೀಗಳ್ ॥
ಎನತು ದುರದೃಷ್ಟದೆ ಮಹಾ ।
ಗುಣಕ್ಕೆಯುಪಘಾತಮೆಸಗಿದಂ ಬೆದರಿರ್ಪೆಂ ॥ ೫ ॥

**ಪದ್ಮಾವತಿಃ**—ಯೋಗ್ಯವಾದ ಕಾಲದಲ್ಲಿ ವಾಸವದತ್ತೆಯನ್ನು ಉಳಿಸಿಕೊಳ್ಳುವುದು ಶಕ್ಯವಾಗಿರಲಿಲ್ಲವೇ?

**ಪ್ರತೀಹಾರಿ**:—ಪೂಜ್ಯರೇ, ಕಾಂಚುಕೀಯನೂ, ಧಾತ್ರಿಯೂ ಬಾಗಿಲಲ್ಲಿ ಬಂದಿದ್ದಾರೆ.

**ಅರಸು**:—ಬೇಗನ್ನೇ ಒಳಗೆ ಬರಹೇಳು.

**ಪ್ರತಿಹಾರಿ**:—ಅಪ್ಪಣೆ.

[ ಹೋಗುತ್ತಾಳೆ.

( ಆ ಮೇಲೆ ಕಾಂಚುಕೀಯನೂ, ಧಾತ್ರಿಯೂ,
ಪ್ರತೀಹಾರಿಯೂ ಬರುತ್ತಾರೆ. )

**ಕಾಂಚುಕೀಯ**:—ಪೂಜ್ಯನೇ,

ಸ್ಮರಿಸಲ್ ವಾಸವದತ್ತೆಯ ।
ಮರಣದ ವಾರ್ತೆಯನತೀವದುಃಖಮುದಕ್ಕುಂ ॥
ಇರದೆನ್ನ ಬಂಧುವಿಗೊದವಿ- ।
ದರಸುತನಮನೀಗಳೀಕ್ಷಿಸಲ್ಕತಿಹರ್ಷಂ ॥ ೬ ॥

ಪರರಿಂದಪಹೃತಮಾದಾ ।
ಅರಸುತನಂ ಸಾಧಿಸಿದೊಡೆ ದೇವೀಕ್ಷೇಮಂ ॥
ಇರದೆಲೆ ದೈವವೆಯಾವುದು ।
ತಿರೆಯೊಳ್ ನೀಂ ಗಯ್ಯಲಸದಳಂ ತಾನಿರ್ಕುಂ? ॥ ೭ ॥

**ಪ್ರತೀಹಾರಿ**:—ಇಗೋ, ಮಹಾರಾಜನು! ಪೂಜ್ಯನು ಮುಂದಕ್ಕೆ ನಡೆಯಬೇಕು.

**ಕಾಂಚುಕೀಯ**:—( ಸಮೀಪಕ್ಕೆ ಬಂದು ) ಆರ್ಯಪುತ್ರನಿಗೆ ವಿಜಯವಾಗಲಿ.

**ಧಾತ್ರಿ**:—ಮಹಾರಾಜನಿಗೆ ಗೆಲವಾಗಲಿ.

**ಅರಸು**:—( ಆದರದಿಂದ ) ಪೂಜ್ಯನೇ,

ತಿರೆಯೊಳಗುದಯಾಸ್ತಂಗಳ- ।
ನರಸರ ವಂಶಕ್ಕೆ ಪುಟ್ಟಿಪಂ ಭೂಮೀಶಂ ॥

ಹರುಷದಿನಿರ್ಪನೆಯೆನ್ನೊಳ್ ।
ಪರಿಪರಿಯಿಂ ಬಂಧುಭಾವದಿಂ ನಡೆವಂ ತಾಂ ॥ ೮ ॥

**ಕಾಂಚುಕೀಯ**:—ಅಹುದು, ಮಹಾಸೇನನು ಕ್ಷೇಮದಿಂದಿದ್ದಾನೆ; ಮತ್ತು ಇಲ್ಲಿಯ ಕ್ಷೇಮಸಮಾಚಾರವನ್ನಾದರೂ ತಿಳಿಯಬಯಿಸುತ್ತಾನೆ.

**ಅರಸು**:—( ಆಸನದಿಂದ ಎದ್ದು ) ಮಹಾಸೇನನು ಏನಪ್ಪಣೆ ಮಾಡಿದ್ದಾನೆ?

**ಕಾಂಚುಕೀಯ**:—ವೈದೇಹಿಯ ಮಗನಾದ ನಿನಗೆ ಇದು ತಕ್ಕುದು; ಆಸನದಲ್ಲಿ ಕುಳಿತುಕೊಂಡೇ ಮಹಾಸೇನನ ಅಪ್ಪಣೆಯನ್ನು ಕೇಳುವುದಾಗಬೇಕು.

**ಅರಸು**:—ಮಹಾಸೇನನ ಅಪ್ಪಣೆಯೇನು?

[ ಕುಳಿತುಕೊಳ್ಳುತ್ತಾನೆ.

**ಕಾಂಚುಕೀಯ**:—ಹಗೆಗಳು ಸೆಳೆದುಕೊಂಡ ರಾಜ್ಯವು ಸುದೈವದಿಂದ ತಿರುಗಿ ಸಿಕ್ಕಿತೆಂದು ಹೇಳಿ ಕಳುಹಿದ್ದಾನೆ. ಯಾಕದಂರೆ,

ವಿರಹಿತಶಕ್ತರೊಳ್ ಕಾ ।
ತರರಪ್ಪೊರಳಂ ಜನಿಯಿಸದದು ಸೂತ್ಸಾಹಂ ॥
ನರಪತಿ ಲಕ್ಷ್ಮಿಯನೇಗಳ್ ।
ನೆರೆಯುತ್ಸಾಹಿಗಳೆ ಭೋಗಿಪರ್ ಸಮ್ಮುದದಿಂ ॥ ೯ ॥

**ಅರಸು**:—ಪೂಜ್ಯನೇ ಎಲ್ಲವೂ ಮಹಾಸೇನನ ಪ್ರಭಾವವು.

ಪಿಡಿದಂ ಬೇಂಟೆಯೊಳೆನ್ನನಂತು ಪೊರೆದಂ ಪುತ್ರರ್ಕಳಿಂ ಕೂಡಿ ತಾಂ ।
ದಿಡವಾ ಕನ್ಯೆಯನಾಗಳಾಂ ಗ್ರಹಿಸಿದಂ ತತ್ಪಾಲನಂಗೆಯ್ದನಿ ॥

ಲ್ಲೊಡನಾತಂ ಮರಣಪ್ರವಾದಮನೆ ಕೇಳ್ದುಂ
ಸಂತತಸ್ನೇಹಿತಂ।
ಬಿಡದೀಯುಕ್ತ್ಸುವತ್ಸಮಂ ದೊರಕಿಸಲ್ ತಾನಾತನೇ
ಕಾರಣಂ ॥ ೧೦ ॥

**ಕಾಂಚುಕೀಯ:**—ಇದು ಮಹಾಸೇನನ ಸಂದೇಶವು. ದೇವಿಯ ಸಂದೇಶವನ್ನು ಈ ಪೂಜ್ಯೆಯು ಹೇಳುವಳು.

**ಅರಸು:**—ಹಾ, ತಾಯೀ!

ಪಿರಿಯಳ್ ಷದಿನಾರಂತಃ-।
ಪುರಂಗಳೊಳ್ ಪಾವನತಮಚರಿತೆಯುಳ್ಳಳ್ ॥
ಪುರದೇವತೆ ಕುಶಲಿನಿಯೇಂ!।
ಕರುಣಾಕರೆ ಮತ್ಪ್ರವಾಸದುಃಖಾರ್ತೆ ಗಡಾ! ॥ ೧೧ ॥

**ದಾತ್ರಿ:**—ಒಡತಿಯು ಸುಖದಿಂದಿದ್ದಾಳೆ. ಮತ್ತು ತಮ್ಮ ಕುಶಲವನ್ನೆಲ್ಲ ಕೇಳಿದ್ದಾಳೆ.

**ಅರಸು:**—ಎಲ್ಲ ಕುಶಲವನ್ನೇ! ಈ ತರದಿಂದ ಕುಶಲವು.

**ಧಾತ್ರಿ:**—ಯಜಮಾನನೇ, ಬಹಳವಾಗಿ ದುಃಖಿಸುವದು ಸಾಕು.

**ಕಾಂಚುಕೀಯ:**—ಆರ್ಯಪುತ್ರನು ಧೈರ್ಯವನ್ನು ತಾಳಬೇಕು. ಈ ಪ್ರಕಾರ ತಮ್ಮಿಂದ ದಿನಾಲು ಸ್ನೇಹಾತಿಶಯದಿಂದ ಸ್ಮರಿಸಲ್ಪಡುವ ಆ ಮಹಾಸೇನನ ಪುತ್ರಿಯು ಸತ್ತುಹೋದರೂ ಇದ್ದಂತೆಯೇ ಆಗಿದೆ. ಅಥವಾ,

ಮರಣದ ಕಾಲದೊಳ್ ಪೊರೆಯಲಾರ್ಪರದಾರ್
ಬಿಡದಾರನಂತೆ ಕೇಳ್।
ಹರಿದೊಡೆ ಹಗ್ಗಮೂರ್ ಪಿಡಿದಪರ್ ಕೊಡಮಂ ಗಡ
ಭೂಮಿಭಾಗದೊಳ್॥

ನಿರುತದೊಳಂ ಬನಕ್ಕೆ ಸಮಥರ್ವುದೆ ಲೋಕಮಿ
ದೆಲ್ಲಮುಂ ಗಡೀ ।
ತೆರದೊಳೆ ಕಾಲ ಕಾಲಕೆ ವಿವರ್ಧನಮುಂ ಪಡೆಗುಂ
ವಿನಾಶಮುಂ ॥ ೧೨ ॥

ಅರಸು:--ಪೂಜ್ಯನೇ, ಅಲ್ಲ; ಹಾಗಲ್ಲ.

ಎನಗೆ ಪ್ರಿಯೆಯುಂ ಮಹಾಸೇ- ।
ನನ ಮಗಳಂ ಮಹಿಷಿಯುಂ ಸುಶಿಷ್ಯೆಯುನೆಂತಾಂ ॥
ನೆನೆಯುದೆಯಿರ್ಪೆನೆರಡನೆಯು ।
ಜನುಮದೊಳಾದೊಡಮಹಾ ! ಅದಲ್ಲಂಶಕ್ಯಂ ॥ ೧೩ ॥

ಧಾತ್ರಿ:—ನನ್ನ ಒಡೆಯಳು ಹೇಳಿ ಕಳುಹಿಸಿರುವುದೇ ನೆಂದರೆ, ವಾಸವದತ್ತೆಯು ಸತ್ತಳು. ನನಗಾಗಲಿ, ಮಹಾಸೇನನಿಗಾಗಲಿ, ಗೋಪಾಲಕನೂ, ಪಾಲಕನೂ ಹೇಗೋ, ಹಾಗೆಯೇ ನೀನಾದರೂ ಅಳಿಯನೆಂದು ಮೊದಲೇ ನಿಶ್ಚಯಿಸಿದ್ದೆವು. ಆದುದರಿಂದಲೇ, ಉಜ್ಜಯಿನಿಗೆ ನಿನ್ನನ್ನು ಕರೆಯಿಸಿದ್ದೆವು. ವೀಣೆಯನ್ನು ಕಲಿಯುವುದೆಂಬ ನೆವವನ್ನು ಮುಂದೆ ಮಾಡಿ ವಾಸವದತ್ತೆಯನ್ನು ಅನಗ್ನಿಸಾಕ್ಷಿಕವಾಗಿ ನಿನಗೆ ಒಪ್ಪಿಸಿದೆವು. ಚಪಲತೆಯಿಂದ ನೀನು ವಿವಾಹಮಂಗಲವನ್ನು ಆಗಲೇ ತೀರಿಸಿಕೊಂಡೆ. ಆ ಮೇಲೆ ನಾವು ನಿನ್ನ ಹಾಗು ವಾಸವದತ್ತೆಯ ಬೊಂಬೆಗಳನ್ನು ಚಿತ್ರಫಲಕದ ಮೇಲೆ ಬರೆಯಿಸಿ, ಮದುವೆಯ ವಿಧಿಯನ್ನು ಪೂರ್ಣಮಾಡಿದೆವು. ಆ ಚಿತ್ರಫಲಕವನ್ನು ನಿನ್ನೆಡೆಗೆ ಕಳುಹಿಸಿದ್ದೇವೆ. ಅದನ್ನು ನೋಡಿಕೊಂಡು ಶಾಂತನಾಗಿರು.

ಅರಸು:—ಪೂಜ್ಯೆಯು ತನಗೆ ಅನುರೂಪವಾದುದನ್ನೇ ಅತಿ ಸ್ನೇಹದಿಂದ ಹೇಳಿ ಕಳುಹಿದ್ದಾಳೆ.

ಶತರಾಜ್ಯಲಾಭದಿಂದಮು- ।
ಮತಿಪ್ರಿಯುಂ ಮಾತಿದೆನೆಗೆ ಸತ್ಯಂ ಸತ್ಯಂ ॥

ನಿತರಾಂ ಪ್ರಮಾದಿಯೊಳ್ ವಿ- ।
ಸ್ಮಿತಮಾಗದ ನೇಹಮೆನ್ನೊಳಂ ವಸಿಪುದರಿಂ ॥ ೧೪ ॥

**ಪದ್ಮಾವತಿ:**—ಆರ್ಯಪುತ್ರರೇ, ಚಿತ್ರದಲ್ಲಿರುವ ಆ ಹಿರಿಯು ಳನ್ನು ನೋಡಿ ನಮಸ್ಕರಿಸಲಿಚ್ಛಿಸುತ್ತೇನೆ.

**ಧಾತ್ರಿ:**—ಭರ್ತೃದಾರಿಕೇ, ನೋಡು; ನೋಡು. ( ಚಿತ್ರಫಲಕವನ್ನು ತೋರಿಸುತ್ತಾನೆ. )

**ಪದ್ಮಾವತಿ:**—( ಚಿತ್ರವನ್ನು ನೋಡಿ ತನ್ನಲ್ಲಿ ) ಅಹಾ! ಪೂಜ್ಯೆಯಾದ ಆವಂತಿಕೆಯು ಇವಳನ್ನು ಸಂಪೂರ್ಣವಾಗಿ ಹೋಲುವಳು. ( ಪ್ರಕಾಶವಾಗಿ ) ಆರ್ಯಪುತ್ರರೇ, ಈ ಚಿತ್ರವು ಆರ್ಯೆಳ ಹಾಗೆಯೇ ಇರುವುದಲ್ಲವೇ ?

**ಅರಸು:**—ಅವಳಂತೆಯೇ ಇರುವುದಿಷ್ಟೇ ಅಲ್ಲ; ಅವಳೇ ಎಂದು ತಿಳಿಯುತ್ತೇನೆ. ಅಯ್ಯೋ ! ಕಷ್ಟವು ! ಕಷ್ಟವು !

ಎಂತೀ ಸ್ನಿಗ್ಧಸುವರ್ಣಮು- ।
ದಾಂತುದು ದಾರುಣವಿಪತ್ತಿಯಂ ಗಡ ! ತಿಳಿಯೆಂ ॥
ಎಂತೀಮುಖ ಮಾಧುರ್ಯಮು- ।
ದಾಂತುದು ದೂಷಿತತೆಯಂ ಜ್ವಲನನಿಂ ತಿಳಿಯೆಂ ॥೧೫॥

**ಪದ್ಮಾವತಿ:**—ಆರ್ಯಪುತ್ರನ ಪ್ರತಿಕೃತಿಯನ್ನು ನೋಡಿ, ಇವಳು ಆರ್ಯೆಯಂತೆಯೇ ಇರುವಳೋ ಇಲ್ಲವೋ ಎಂದು ನಿಶ್ಚಯಿಸುತ್ತೇನೆ.

**ಧಾತ್ರಿ:**—ಭರ್ತೃದಾರಿಕೆಯೇ, ನೋಡು; ನೋಡು.

**ಪದ್ಮಾವತಿ:**—( ನೋಡಿ ) ಆರ್ಯಪುತ್ರನ ಪ್ರತಿಕೃತಿಯ ಸಾಮ್ಯದಿಂದ ಇದಾದರೂ ಪೂಜ್ಯೆಗೆ ಸದೃಶವಾಗಿಯೇ ಇದೆಯೆಂದು ತಿಳಿಯುತ್ತೇನೆ.

**ಅರಸು:**—ದೇವೀ, ಚಿತ್ರವನ್ನು ನೋಡಿದಾಗಿನಿಂದ ನೀನು

ಹರ್ಷವಿಷಾದಗಳಿಂದ ಕೂಡಿದವಳಂತೆ ಕಾಣುತ್ತೀ, ಇದರ ಕಾರಣವೇನು?

**ಪದ್ಮಾವತಿ:**—ಆರ್ಯಪುತ್ರರೇ, ಈ ಪ್ರತಿಕೃತಿಗೆ ಸಮನಾದ ಆಕೃತಿಯುಳ್ಳವಳು ಇಲ್ಲಿಯೇ ಇದ್ದಾಳೆ.

**ಅರಸು:**—ಏನು? ವಾಸವದತ್ತೆಗೆ ಸಮಾನೆಯೇ?

**ಪದ್ಮಾವತಿ:**—ಅಹುದು.

**ಅರಸು:**— ಹಾಗಾದರೆ ಬೇಗನೇ ಕರೆಯಿಸು.

**ಪದ್ಮಾವತಿ:**—ಆರ್ಯಪುತ್ರರೇ, ನಾನು ಚಿಕ್ಕತನದಲ್ಲಿದ್ದಾಗ ಯಾವನೋ ಒಬ್ಬ ಬ್ರಾಹ್ಮಣನು ತನ್ನ ತಂಗಿಯೆಂದು ಹೇಳಿ ನನ್ನ ಹತ್ತರ ಅವಳನ್ನು ಇಟ್ಟು ಹೋಗಿದ್ದಾನೆ. ಅವಳ ಗಂಡನು ದೇಶಾಂತರದಲ್ಲಿರುವುದರಿಂದ ಎರಡನೆಯ ಗಂಡಸರನ್ನು ಅವಳು ನೋಡುವುದಿಲ್ಲ. ಆದುದರಿಂದ ನನ್ನ ಸಂಗಡ ಬಂದಾಗ ಅವಳನ್ನು ನೋಡಿ ಆರ್ಯಪುತ್ರರು ತಿಳಿದುಕೊಳ್ಳಬಹುದು.

**ಅರಸು:**—

ಪೌರುವನ ತಂಗಿಯಾದೊಡೆ ।
ಬೇರೆಯುವಳ್ ಸ್ಪಷ್ಟಮಪ್ಪಳಯ್ ಭೂತಳದೊಳ್ ॥
ಸಾರೂಪ್ಯಂ ಸ್ಫುಟಮರಿಯಲ್ ।
ಬಾರದ ತೆರದಿಂದೆ ತೋರುಗುಂ ವಸ್ತುಗಳೊಳ್ ॥ ೧೬ ॥

( ಅನಂತರ ಪ್ರತೀಹಾರಿಯು ಬರುತ್ತಾಳೆ. )

**ಪ್ರತಿಹಾರಿ:**—ಒಡೆಯನಿಗೆ ಗೆಲವಾಗಲಿ, ಉಜ್ಜಯಿನೀ ಪಟ್ಟಣದ ಬ್ರಾಹ್ಮಣನೊಬ್ಬನು ಒಡತಿಯ ಬಳಿಯಲ್ಲಿಟ್ಟ ತನ್ನ ತಂಗಿಯನ್ನು ತಿರುಗಿ ಕರೆದುಕೊಂಡು ಹೋಗುವುದಕ್ಕಾಗಿ ಬಾಗಿಲಲ್ಲಿ ಬಂದಿದ್ದಾನೆ.

**ಅರಸು:**—ಪದ್ಮಾವತೀ ಅದೇ ಬ್ರಾಹ್ಮಣನೇನು?

**ಪದ್ಮಾವತಿ:**—ಇರಬಹುದು.

**ಅರಸು:**—ಯೋಗ್ಯವಾದ ಸತ್ಕಾರದಿಂದ ಆವನನ್ನು ಒಳಗೆ ಬರಮಾಡು.

**ಪ್ರತಿಹಾರಿ:**—ಅಪ್ಪಣೆ.

[ ಹೋಗುತ್ತಾಳೆ.

**ಅರಸು:**—ಪದ್ಮಾವತೀ, ನೀನಾದಗೂ ಅವಳನ್ನು ಕರೆದು ಕೊಂಡು ಬಾ.

**ಪದ್ಮಾವತಿ:**—ಆರ್ಯಪುತ್ರರ ಅಪ್ಪಣೆಯಂತಾಗಲಿ.

[ ಹೋಗುತ್ತಾಳೆ.

( ಅನಂತರ ಯೌಗಂಧರಾಯಣನೂ ಪ್ರತೀಹಾರಿಯೂ ಬರುತ್ತಾರೆ. )

**ಯೌಗಂಧರಾಯಣ:**—ಅಹಾ!

ಅರಸನೊಳ್ಳಿದಕೆಯರಸಿಯು ।
ಮರೆಮಾಜಿದೆನಿಂತುಗೆಯ್ದು ನಿಜಹಿತಮೆನುತಂ ॥
ಇರದೆಲ್ಲಂ ಸಿದ್ಧಿಸಿದೊಡ- ।
ಮರಸಂ ಶಂಕಿಸುವನೇನನೊರೆವನೊ? ಎನುತಂ ॥೧೭॥

**ಪ್ರತೀಹಾರಿ:**— ಇಗೋ ಯಜಮಾನನು! ಆರ್ಯನು ಮುಂದಕ್ಕೆ ನಡೆಯಬೇಕು.

**ಯೌಗಂಧರಾಯಣ:**—( ಹತ್ತರ ಬಂದು ) ತಮಗೆ ವಿಜಯವಾಗಲಿ, ವಿಜಯವಾಗಲಿ.

**ಅರಸು:**—( ತನ್ನಲ್ಲಿ ) ಗುರುತಿನ ಸ್ವರದಂತೆ ಕೇಳುತ್ತಿದೆ. ( ಪ್ರಕಾಶವಾಗಿ ) ಪೂಜ್ಯನಾದ ಬ್ರಾಹ್ಮಣನೇ, ನಿನ್ನ ತಂಗಿಯನ್ನು ಪದ್ಮಾವತಿಯ ಬಳಿಯಲ್ಲಿ ಇಟ್ಟು ಹೋಗಿದ್ದೆಯಾ?

**ಯೌಗಂಧರಾಯಣ:**—ಅಹುದು.

**ಅರಸು:**—ಹಾಗಾದರೆ, ಇವನ ತಂಗಿಯನ್ನು ಬೇಗನೆ ಕರೆಯಿರಿ? ಬೇಗನೇ ಕರೆಯಿರಿ.

**ಪ್ರತೀಹಾರಿ:**—ಅಪ್ಪಣೆ.

[ ಹೋಗುತ್ತಾಳೆ.

( ಆ ಮೇಲೆ ಪದ್ಮಾವತಿಯೂ, ಆವಂತಿಕೆಯೂ, ಪ್ರತೀಹಾರಿಯೂ ಬರುತ್ತಾರೆ. )

**ಪದ್ಮಾವತಿ:**—ಆರ್ಯೇ, ಹೀಗೆ ಬಾ. ಹೀಗೆ ಬಾ. ನಿನಗೆ ಸಂತೋಷದ ಸುದ್ದಿಯನ್ನು ಹೇಳುತ್ತೇನೆ.

**ಆವಂತಿಕೆ:**—ಅದೇನು ! ಅದೇನು !

**ಪದ್ಮಾವತಿ:**—ನಿಮ್ಮಣ್ಣನು ಬಂದಿದ್ದಾನೆ.

**ಆವಂತಿಕೆ:**—ಈಗಲಾದರೂ ಸುದೈವದಿಂದ ನೆನಪಿಟ್ಟಿದ್ದಾನೆ.

**ಪದ್ಮಾವತಿ:**—( ಹತ್ತರ ಬಂದು ) ಆರ್ಯಪುತ್ರರಿಗೆ ವಿಜಯವಾಗಲಿ; ಇಗೋ, ಇವಳೆ.

**ಅರಸು:**- ಪದ್ಮಾವತೀ, ಇವಳನ್ನು ತಿರುಗಿ ಅರ್ಪಿಸು. ಇಟ್ಟುಕೊಂಡ ಪದಾರ್ಥವನ್ನು ಅನ್ಯರ ಸಾಕ್ಷಿಯಾಗಿ ಅರ್ಪಿಸಬೇಕು. ಈಗ ಈ ಆರ್ಯನಾದ ರೈಭ್ಯಸನೂ, ಪೂಜ್ಯೆಯಾದ ವಸುಂಧರೆಯೂ ಸಾಕ್ಷಿಯಾಗುವರು.

**ಪದ್ಮಾವತಿ:**—ಪೂಜ್ಯನೇ ಇನ್ನು ಆರ್ಯೆಯನ್ನು ಕರೆದುಕೊಂಡು ಹೋಗು.

**ಧಾತ್ರಿ:**—( ಆವಂತಿಕೆಯನ್ನು ದಿಟ್ಟಿಸಿ ) ಅಹಹಾ! ಇವಳು ಭರ್ತೃದಾರಿಕೆಯಾದ ವಾಸವದತ್ತೆಯು!

**ಅರಸು:**—ಇದೇನು? ಮಹಾಸೇನಪುತ್ರಿಯೇ!! ದೇವೀ, ಪದ್ಮಾವತಿಯೊಡನೆ ಒಳಮನೆಯಲ್ಲಿ ಕುಳಿತುಕೋ.

**ಯೌಗಂಧರಾಯಣ:**—ಬೇಡ. ಒಳಗೆ ಹೋಗಬೇಡ. ( ಅರಸನ ಕಡೆಗೆ ನೋಡಿ ) ಇವಳು ನನ್ನ ತಂಗಿ.

**ಅರಸು:**—ತಾವು ಹೇಳುವುದೇನು? ಇವಳು ಮಹಾಸೇನ ಪುತ್ರಿಯಲ್ಲವೇ?

**ಯೌಗಂಧರಾಯಣ:**—ಎಲೈ ರಾಜನೇ,

**ಭರತತರ ಕುಲದೊಳ್ ಜಾತಾ, ।**
**ಅರಸಾ, ಮತಿವಂತ, ಶಿಕ್ಷಿತಾ, ಶುಚಿವಂತಾ ॥**
**ಸರಿಯಲ್ಲಮಿವಳನಿಂತಪ- ।**
**ಹರಿಪುದು ಬಲದಿಂ ನರೇಶಧರ್ಮಾಚಾರ್ಯಾ ॥ ೧೮ ॥**

**ಅರಸು:**—ಆಗಲಿ. ರೂಪಸಾದೃಶ್ಯವನ್ನು ನೋಡೋಣ. ತೆರೆಯನ್ನು ತೆಗೆಯಿರಿ.

**ಯೌಗಂಧರಾಯಣ:**—ಒಡೆಯನಿಗೆ ಜಯವಾಗಲಿ.

**ವಾಸವದತ್ತೆ:**—ಆರ್ಯಪುತ್ರರಿಗೆ ವಿಜಯವಾಗಲಿ.

**ಅರಸು:**—ಅಹಹಾ! ಇವನು ಯೌಗಂಧರಾಯಣನು; ಇವಳು ಮಹಾಸೇನಪುತ್ರಿಯು!

**ಅರಿಯೆಂ ಕನಸೋ! ದಿಟವೋ! ।**
**ತರುಣಿಯಿವಳ್ ಮತ್ತಮೀಗಳುಂ ಕಾಣುವಳೋ! ॥**
**ಇರದಾಂ ವಂಚಿತನಾದೆಂ ।**
**ತರಳೆಯಿನಿವಳಿಂದಮೀ ತೆರದಿನೇ ಮೊದಲೊಳ್ ॥ ೧೯ ॥**

**ಯೌಗಂಧರಾಯಣ:**— ಒಡೆಯನೇ, ದೇವಿಯ ನಿಜ ಸ್ವರೂಪವನ್ನು ಬಚ್ಚಿಟ್ಟುದರಿಂದ ನಾನು ತಪ್ಪುಗಾರನಾಗಿದ್ದೇನೆ. ಆದುದರಿಂದ ನನ್ನನ್ನು ಕ್ಷಮಿಸಬೇಕು. ( ಕಾಲುಗಳಿಗೆರಗುತ್ತಾನೆ.)

**ಅರಸು:**—( ಎಬ್ಬಿಸಿ ) ಅಹಹಾ! ನೀನು ಯೌಗಂಧರಾಯಣನಲ್ಲವೇ?

**ಸಮರಂಗಳಿಂದೆ ಶಾಸ್ತ್ರದ ।**
**ಸುಮಂತ್ರನಿವಹದೆ, ರಣದೆ, ವೃಥೋನ್ಮಾದದ ಮೇಣ್ ॥**

ಅಮಿತಸುಯುತ್ನದೆ, ನಿನ್ನಿಂ।
ಸಮುದ್ಧೃತಂ ಮಜ್ಜಮಾನನಾಂ ಗಡಮೀಗಳ್ ॥ ೨೦ ॥

ಯೌಗಂಧರಾಯಣ:—ನಾವು ಒಡೆಯನ ಭಾಗ್ಯಗಳನ್ನು ಹಿಂಬಾಲಿಸುವವರು.

ಪದ್ಮಾವತಿ:--ಅಹಹಾ! ಇವಳೇ ಪೂಜ್ಯೆಯಾದ ವಾಸವದತ್ತೆ! ಆರ್ಯೆ! ಸಖಿಯರಿಗೆ ಸಮಾನೆಯೆಂದು ತಿಳಿದು, ನಿನ್ನ ದಿಟವಾದ ರೂಪವನ್ನರಿಯದ ನಾನು ನನ್ನ ಕರ್ತವ್ಯವನ್ನು ಮೀರಿದ್ದೇನೆ. ಆದುದರಿಂದ ಸಾಷ್ಟಾಂಗವಾಗಿ ನಮಸ್ಕರಿಸಿ ನಿನ್ನನ್ನು ಒಲಿಸಿಕೊಳ್ಳುತ್ತೇನೆ. (ಕಾಲುಗಳ ಮೇಲೆ ಬೀಳುತ್ತಾಳೆ.)

ವಾಸವದತ್ತೆ:— (ಪದ್ಮಾವತಿಯನ್ನೆಬ್ಬಿಸಿ) ಏಳು; ಏಳು. ಸೌಭಾಗ್ಯವತೀ, ಏಳು. ನನ್ನ ರಕ್ಷಣೆಯನ್ನು ಮಾಡಿದ ನೀನು ಅಪರಾಧಿನಿಯಲ್ಲವೇ?

ಪದ್ಮಾವತಿ:—ಅನುಗ್ರಹೀತೆಯಾದೆನು.

ಅರಸು:—ಗೆಳೆಯನೇ ಯೌಗಂಧರಾಯಣಾ, ದೇವಿಯ ರೂಪವನ್ನು ಬಚ್ಚಿಡುವುದಕ್ಕೆ ಏಕೆ ಮನಸ್ಸು ಮಾಡಿದೆ?

ಯೌಗಂಧರಾಯಣ:—ಕೌಶಾಂಬೀಮಾತ್ರವನ್ನು ಆಳುವೆನೆಂಬ ಉದ್ದೇಶದಿಂದ ಹಾಗೆ ಮಾಡಿದೆನು.

ಅರಸು:—ಹಾಗಾದರೆ, ಪದ್ಮಾವತಿಯ ಬಳಿಯಲ್ಲಿ ಅವಳನ್ನಿಡುವುದಕ್ಕೆ ಕಾರಣವೇನು?.

ಯೌಗಂಧರಾಯಣ:— ಪುಷ್ಪಕಭದ್ರರೇ ಮೊದಲಾದ ಜೋಯಿಸರು "ಪದ್ಮಾವತಿಯು ಒಡೆಯನ ರಾಣಿಯಾಗುವಳೆ"ಂದು ಹೇಳಿದ ಕಾರಣ ಅವಳಲ್ಲಿ ಇಟ್ಟೆನು.

ಅರಸು:—ಇದು ರುಮಣ್ವಂತನಿಗೆ ತಿಳಿದಿತ್ತೇ?

ಯೌಗಂಧರಾಯಣ:— ಒಡೆಯನೇ, ಎಲ್ಲರಿಗೂ ಗೊತ್ತಿತ್ತು.

ಅರಸು:—ಅಹಾ! ರುಮಣ್ವಂತನು ಬಹಳೇ ಕಪಟಿ.

ಯೌಗಂಧರಾಯಣ:— ಒಡೆಯನೇ, ಮಹಾದೇವಿಯವರಿಗೆ ಕುಶಲವನ್ನು ತಿಳಿಸುವುದಕ್ಕೋಸ್ಕರ ಆರ್ಯನಾದ ರೈಭ್ಯನೂ, ಪೂಜ್ಯೆಯಾದ ವಸುಂಧರೆಯೂ ತಿರುಗಿ ಹೋಗಲಿ.

ಅರಸು:— ಬೇಡ. ಬೇಡ. ಪದ್ಮಾವತಿಯನ್ನೊಡಗೊಂಡು ನಾವೆಲ್ಲರೂ ಅಲ್ಲಿಗೆ ಹೋಗೋಣ.

ಯೌಗಂಧರಾಯಣ:—ಒಡೆಯನ ಅಪ್ಪಣೆಯಂತಾಗಲಿ.

( ಭರತವಾಕ್ಯವು. )

ಕಡಲೆಲ್ಲೆಯವಳನೊಂದೇ ।
ಕೊಡೆಯಿಂ ಚಳಿವೆಟ್ಟುಬಿಂಜೆದುಂಡುಳ್ಳವಳಂ ॥
ಪೊಡವಿಯನಾಳ್ಗೆ ಮಗೇಗಳ್ ।
ಬಿಡದೆ ಗಡಾ! ರಾಜಸಿಂಹನತಿ ಮುದದಿಂದಂ ॥ ೨೧ ॥

( ಎಲ್ಲರೂ ಹೊರಟು ಹೋಗುತ್ತಾರೆ. )

ಆರನೆಯ ಅಂಕವು ಮುಗಿಯಿತು.

ಕರ್ಣಾಟಕ ಸ್ವಪ್ನವಾಸವದತ್ತಂ ಸಂಪೂರ್ಣಂ.

ಜಯ ಬಲಭೀಮ ಸಮರ್ಥ ।



